

## ಕರ್ನಾಟಕ ಗಾಂಧಿ ಸ್ಮಾರಕ ನಿಧಿ

ಗಾಂಧಿ ಭವನ, ಕುಮಾರಪಾರ್ಕ್ ಪೂರ್ವ
ಬೆಂಗಳೂರು - 560001

https://gandhibhavan.in

# ಗಾಂಧಿ ಭವನ ಡಿಜಿಟಲ್ ಆರ್ಕೈವ್



#SERVANTSOFKNOWLEDGE
Scanning Is The New Spinning

https://archive.org/details/GandhiBhavan

**ಗಾಂಧೀಜಿಯವರ ವಿಚಾರಗಳನ್ನು ಪ್ರಸಾರಗೊಳಿಸಲು ಕೈಗೊಂಡಿರುವ ಡಿಜಿಟಲ್ ಮಾಧ್ಯಮ ಚಟುವಟಿಕೆ**



## ಗಾಂಧಿ ಸಂಚಯ

https://gandhi.sanchaya.net



## ಕರ್ನಾಟಕ ಗಾಂಧಿ ಸ್ಮಾರಕ ನಿಧಿ

ಎಲ್ಲ ಪ್ರಕಟಣೆಗಳು ಈ ಜಾಲತಾಣದಲ್ಲಿ ಉಚಿತವಾಗಿ ಲಭ್ಯ



## ಬಾಪೂ ಪ್ರಪಂಚ

ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಮಾಸಿಕ
'ಬಾಪೂ ಪ್ರಪಂಚ ' ಇ - ಪುಸ್ತಕ ಇಲ್ಲಿ ದೊರೆಯುತ್ತದೆ.






ರೂ. 28/- BAAPU PRAPANCHA

ಕರ್ನಾಟಕ ಗಾಂಧಿ ಸ್ಮಾರಕ ನಿಧಿ

# ಬಾಪು ಪ್ರಪಂಚ

ಕನ್ನಡ-ಇಂಗ್ಲೀಷ್ ಮಾಸಿಕ ಸಂಪುಟ-05 • ಸಂಚಿಕೆ-11 • ಏಪ್ರಿಲ್ 2024





ಕರ್ನಾಟಕ ಗಾಂಧಿ ಸ್ಮಾರಕ ನಿಧಿ

**ಬಾಪು ಪ್ರಪಂಚ**
ಕನ್ನಡ-ಇಂಗ್ಲೀಷ್ ಮಾಸಿಕ

**BAPU PRAPANCHA**
(A monthly Kannada English Magazine of Gandhian Thoughts)

ಪ್ರಧಾನ ಸಂಪಾದಕರು
**ನಾಡೋಜ ಡಾ. ವೂಡೇ ಪಿ. ಕೃಷ್ಣ**

Chief Editor :
**Nadoja Dr Wooday P Krishna**

ಸಂಪಾದಕರು :
ಎನ್. ಆರ್. ವಿಶುಕುಮಾರ್

Editor :
**N R Vishukumar**

ಪ್ರಕಾಶಕರು :
ಕಾರ್ಯದರ್ಶಿ,
ಕರ್ನಾಟಕ ಗಾಂಧಿ ಸ್ಮಾರಕ ನಿಧಿ
ಗಾಂಧಿ ಭವನ, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು - 560 001

Published by :
**Secretary**
**Karnataka Gandhi Smaraka Nidhi**
Gandhi Bhavana, Kumara Park East
Bangalore - 560 001

080 22261967 / 9738605799
gandhibhavanabengaluru@gmail.com

Printed at :
**Printastic**
272, 2nd Main Road, 6th Cross,
Lavakushanagar, Laggere Bangalore-58
Ph : +91 9886747417
E-mail : printastic.21@gmail.com



Design : **Ujwal Creations,** Bangalore



# ಪತ್ರಗಳು

ಮಾನ್ಯರೆ ,

ಬಾಪು ಪ್ರಪಂಚದ ಮಾರ್ಚ್ ಸಂಚಿಕೆಯಲ್ಲಿ ಗಾಂಧೀಜಿ ಸಂವಾದಗಳು ಲೇಖನ ಉಪಯುಕ್ತವಾಗಿವೆ. ತಾನು ಸನಾತನಿ ಎಂದು ಅಭ್ಯಂತರವಿಲ್ಲದೆ ಹೇಳಿಕೊಂಡ ಗಾಂಧೀಜಿಯವರ ಅಭಿಪ್ರಾಯದಲ್ಲಿ ಧರ್ಮವೆಂಬುದು ಜೀವನ ವಿಧಾನವೇ (way of life) ಆಗಿತ್ತು .ಆದ್ದರಿಂದಲೇ ಅವರು ಯಾವುದೇ ಧರ್ಮವನ್ನು ದೂರಲಿಲ್ಲ, ಯಾವುದೇ ಧರ್ಮದಿಂದ ದೂರವಾಗಲಿಲ್ಲ ಎಂಬುದು ಸತ್ಯಸ್ಯ ಸತ್ಯ .

ಹೋರಾಟಕ್ಕೆ ಮತ್ತು ಗುರಿಸಾಧನೆಗೆ ಹೊಸ ಮಾರ್ಗವನ್ನು ತೋರಿಸಿಕೊಟ್ಟ ಗಾಂಧೀಜಿ ದೇಶೀಯವಾಗಿ ಬೇರೂರಿದ್ದ ವಿವಿಧ ವಿದ್ಯಮಾನಗಳಿಗೆ ದೇಶ ಹೋಳಾದುದನ್ನು ನೋಡ ಬೇಕಾಯಿತು ಮಾತ್ರವಲ್ಲ ಅವರ ಆಕ್ರೋಶಕ್ಕೆ ಬಲಿಯಾದರೆಂಬುದು ನೋವಿನ ಸಂಗತಿ .

**– ಎಲ್ ನರಸಿಂಹಯ್ಯ , ತೊಂಡೂಟಿ**

* * *

ಮಾನ್ಯರೆ ,

ಬಾಪೂ ಪ್ರಪಂಚದಲ್ಲಿ ಗಾಂಧೀಜಿಯುವರ ಬಗ್ಗೆ ಮಾಹಿತಿ ನೀಡುವುದಕ್ಕಿಂತ ಹೆಚ್ಚಾಗಿ ಪ್ರಸ್ತುತ ಸ್ಥಿತಿಯಲ್ಲಿ ಗಾಂಧಿ ಪ್ರಸ್ತುತತೆ ಹೇಗೆ ಎನ್ನುವುದರ ಬಗ್ಗೆ ಮಾಹಿತಿ ಇರಲಿ. ವಿದೇಶಗಳಲ್ಲಿ ಗಾಂಧಿ ಹೇಗೆ ಅಧ್ಯಯನದ ವಸ್ತು ಆಗುತ್ತಿದ್ದಾರೆ ಎನ್ನುವ ವಿವರಗಳು ಸಿಗಲಿ.

ವ್ಯಕ್ತಿಗತವಾಗಿ ಗಾಂಧಿ ಚಿಂತನೆಗಳನ್ನು ಬದುಕಿನಲ್ಲಿ ಹೇಗೆ ಅಳವಡಿಸಿ ಕೊಳ್ಳಬಹುದು ಎನ್ನುವ ವಿಚಾರ ವಿನಿಮಯ ಆಗ ಬೇಕು . ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳ ಸಮಕಾಲೀನ ರೂಪಾಂತರದ ಬಗ್ಗೆ ಚಿಂತನೆ ನಡೆಸಬೇಕು .

ಯುವಚಿಂತಕರು ಗಾಂಧೀಜಿ ಬಗ್ಗೆ ಗಂಭೀರ ಅಧ್ಯಯನ ಮಾಡುವಂತಹ ವಾತಾವರಣ ನಿರ್ಮಾಣವಾಗಲಿ ಎನ್ನುವುದು ನಮ್ಮ ಆಶಯ. ಗಾಂಧಿ ಭವನ ಇಂಥ ಚಟುವಟಿಕೆಗಳಿಗೆ ವೇದಿಕೆ ಒದಗಿಸುವ ಕೆಲಸ ಮಾಡಲಿ ಎನ್ನುವುದು ನಮ್ಮ ಬಯಕೆ .

**ಸರ್ವೋದಯ ಬಳಗ , ಬೆಂಗಳೂರು**




ಪ್ರಿಯರೆ,

ಬಾಪೂ ಪ್ರಪಂಚ ಸಂಚಿಕೆಯ ಬಗ್ಗೆ ಓದುಗರು ವ್ಯಕ್ತಪಡಿಸುತ್ತಿರುವ ಸದಭಿಪ್ರಾಯಗಳಿಗೆ ಗಾಂಧಿ ಸ್ಮಾರಕ ನಿಧಿ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ನಿಮ್ಮ ಅಪೇಕ್ಷೆಯಂತೆ ಬಾಪೂ ಪ್ರಪಂಚ ಪತ್ರಿಕೆಯನ್ನು ಹೆಚ್ಚು ಜನರಿಗೆ ತಲುಪಿಸಲು ಪ್ರಯತ್ನಿಸುತ್ತೇವೆ.

**ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಪ್ರಕಟಣೆಗಳು ಮತ್ತು ಬಾಪೂ ಪ್ರಪಂಚದ ಇತ್ತೀಚಿನ ಸಂಚಿಕೆಗಳನ್ನು https://gandhibhavan.in ಜಾಲತಾಣದಲ್ಲಿ ವೀಕ್ಷಿಸಿ.**



ಚಂದಾ ಕಳುಹಿಸುವ ಮತ್ತು ಪತ್ರಿಕೆಯ ಬಗ್ಗೆ ತಮ್ಮ ಅಭಿಪ್ರಾಯ ತಿಳಿಸುವ ವಿಳಾಸ :

**ಸಂಪಾದಕರು, ಬಾಪು ಪ್ರಪಂಚ**
ಗಾಂಧಿ ಭವನ
ಕುಮಾರ ಪಾರ್ಕ್ ಪೂರ್ವ,
ಬೆಂಗಳೂರು –560001
gandhibhavanabengaluru@gmail.com



ಬಾಪು ಪ್ರಪಂಚ ಪತ್ರಿಕೆಯ ವಾರ್ಷಿಕ ಚಂದಾ ಹಣ 250 ರೂಗಳನ್ನು ಈ ಕೆಳಗಿನ ಕ್ಯೂಆರ್ ಕೋಡ್ ಮೂಲಕ ಪಾವತಿಸಿ, ನಿಮ್ಮ ಅಂಚೆ ವಿಳಾಸವನ್ನು ಗಾಂಧಿ ಭವನದ ಮೇಲಿನ ವಿಳಾಸಕ್ಕೆ ಹಣ ಪಾವತಿ ವಿವರಗಳ ಜೊತೆ ಕಳುಹಿಸಿ.

# ಗಾಂಧಿ ಹೆಜ್ಜೆ ಜಾಡು ಹಿಡಿದು..



**ತ**ಮಿಳುನಾಡು, ಕರ್ನಾಟಕ, ಆಂಧ್ರದಲ್ಲಿ ತಿರುವಳ್ಳುವರ್, ಸರ್ವಜ್ಞ, ವೇಮನನಂತಹ ಕ್ರಾಂತಿಕಾರಕ ಕವಿವರ್ಯರು ಆಗಿಹೋಗಿದ್ದಾರೆ. ಕೇರಳದ ನಾರಾಯಣಗುರು, ಕರ್ನಾಟಕದ ಕುದ್ಮುಲ್ ರಂಗರಾವ್, ತಮಿಳುನಾಡಿನ ಪೆರಿಯಾರ್ ರಾಮಸ್ವಾಮಿ ನಾಯ್ಕರ್, ಆರ್. ಗೋಪಾಲಸ್ವಾಮಿ ಅಯ್ಯರ್ ಮೊದಲಾದ ಪ್ರೀತಿಯ ವ್ಯಕ್ತಿತ್ವಗಳು ಅಮಾನವೀಯ ಅಸ್ಪೃಶ್ಯತೆ ಆಚರಣೆ, ಶ್ರೇಣೀಕೃತ ಜಾತಿ ವ್ಯವಸ್ಥೆ, ಅರ್ಥವಿಲ್ಲದ ಮೌಢ್ಯಗಳನ್ನು ಹೋಗಲಾಡಿಸಲು, ಮಾನವ ಸೌಹಾರ್ದದ ನೆಲೆಯಲ್ಲಿ ದಿಟ್ಟ ಕೆಲಸ ಮಾಡಿರುವುದು ದಕ್ಷಿಣ ಭಾರತದ ಹೆಗ್ಗಳಿಕೆ.

ಭಾರತದ ಇಂತಹ ಭೂಪ್ರದೇಶದ ಮೇಲೆ ಮಹಾತ್ಮ ಗಾಂಧಿ ಅವರು ಬೀರಿದ ಪ್ರಭಾವ ಬಲು ದೊಡ್ಡದು. ಹಾಗೆಯೇ ಈ ಭಾಗದ ಮಾನವೀಯ ನೆಲೆಗಳಿಂದ ಗಾಂಧೀಜಿ ಕೂಡ ಪ್ರಭಾವಕ್ಕೆ ಒಳಗಾಗಿದ್ದುದು ವಿಶೇಷ.

ಬ್ಯಾರಿಸ್ಟರ್ ಆಗಿ ಇಂಗ್ಲೆಂಡಿನಿಂದ ಭಾರತಕ್ಕೆ ಬಂದ ಸೂಕ್ಷ್ಮಗ್ರಾಹಿ ಗಾಂಧೀಜಿ ಅವರಿಗೆ ಗೋಪಾಲಕೃಷ್ಣ ಗೋಖಲೆ ಅವರು, 'ಇಡೀ ಭಾರತವನ್ನು ಸುತ್ತಿ ಬಾ. ನಿನ್ನ ಸಾಮಾಜಿಕ ಗ್ರಹಿಕೆ ಇನ್ನಷ್ಟು ಆಳವಾಗುತ್ತದೆ' ಎಂಬ ಸಲಹೆ ನೀಡಿದ್ದರು. ಆಗ ಗಾಂಧೀಜಿ, ಇಡೀ ಗ್ರಾಮಭಾರತವನ್ನು ಮೋಹದ ರೀತಿಯಲ್ಲಿ ಸಂಚರಿಸಿದ್ದರು. ದಕ್ಷಿಣ ಭಾರತದಲ್ಲೂ ತುಂಬಾ ಆಸ್ಥೆಯಿಂದಲೇ ಓಡಾಡಿದ್ದರು.

ಅಸ್ಪೃಶ್ಯತೆ ನಿವಾರಣೆ, ಹರಿಜನ ನಿಧಿ ಸಂಗ್ರಹ, ಖಾದಿ ಪ್ರಚಾರ ಹಾಗೂ ಸ್ವಾತಂತ್ರ್ಯ ಚಳವಳಿಯ ಜಾಗೃತಿಯ ಉದ್ದೇಶದಿಂದ ಅವರು ಕರ್ನಾಟಕ, ತಮಿಳುನಾಡು, ಕೇರಳ, ಅವಿಭಜಿತ ಆಂಧ್ರಪ್ರದೇಶಕ್ಕೆ 1896ರಿಂದ 1946ರವರೆಗೆ ಐದು ದಶಕಗಳಲ್ಲಿ ಐವತ್ತಕ್ಕೂ ಹೆಚ್ಚು ಸಲ ಪ್ರವಾಸ ಮಾಡಿದ್ದರು.

ಗಾಂಧೀಜಿಯವರು ದಕ್ಷಿಣ ಆಫ್ರಿಕಾದಲ್ಲಿ ಚಳವಳಿಯಲ್ಲಿ ತೊಡಗಿದ್ದಾಗಲೇ ಅವರ ಬೆಂಬಲಿಗರಾಗಿದ್ದವರಲ್ಲಿ ತಮಿಳುನಾಡಿನ ವಳ್ಳಿಯಮ್ಮಾಳ್, ನಾಗಪ್ಪನ್ ನಾರಾಯಣಸ್ವಾಮಿ ಸೇರಿದ್ದರು. 1896ರಲ್ಲಿ ಮೊದಲ ಬಾರಿಗೆ 'ಮದ್ರಾಸ್ ಮಹಾಸಭಾ'ದಲ್ಲಿ ಭಾಗವಹಿಸಿದ್ದ ಗಾಂಧೀಜಿಯವರು ಖಾದಿ ಪ್ರಚಾರ, ಹರಿಜನ ಸುಧಾರಣೆಯ ಬಗ್ಗೆ ಮಾತನಾಡಿದ್ದರು. ನಂತರ ಇಪ್ಪತ್ತು ಸಲ ತಮಿಳುನಾಡು ಪ್ರವಾಸ ಮಾಡಿ, ಇನ್ನೂರಕ್ಕೂ ಹೆಚ್ಚು ಪ್ರದೇಶಗಳಿಗೆ ಭೇಟಿ ನೀಡಿದ್ದರು. 1915ರಲ್ಲಿ ಗಾಂಧೀಜಿಯವರು ಮದ್ರಾಸ್ಗೆ ರೈಲಿನಲ್ಲಿ ಬಂದಿಳಿದು ಕುದುರೆ ಸಾರೋಟಿನಲ್ಲಿ ಮೆರವಣಿಗೆ ಬರುತ್ತಿದ್ದಾಗ, ಅಸಂಖ್ಯಾತ ಅಭಿಮಾನಿಗಳು ಸಾರೋಟಿನಿಂದ ಕುದುರೆಯನ್ನು ಬಿಚ್ಚಿ ತಾವೇ ಸಾರೋಟು ಎಳೆಯುತ್ತಾ ಸಾಗಿದ್ದರು.

ದಕ್ಷಿಣ ಆಫ್ರಿಕಾದಲ್ಲಿದ್ದಾಗಲೇ ತಮಿಳು ಭಾಷೆಯ ಬಗ್ಗೆ ಒಲವು ಹೊಂದಿದ್ದ ಅವರು, ಜಿ.ಯು.ಪೋಪ್ ಅವರ 'ತಮಿಳ್ ಕೈಯೇಡು' ಕೃತಿಯಿಂದ ಆಕರ್ಷಿತರಾಗಿದ್ದರು. 1937ರಲ್ಲಿ ಮದ್ರಾಸ್ನಲ್ಲಿ ನಡೆದ 'ತಮಿಳು ಸಾಹಿತ್ಯ ಸಮ್ಮೇಳನ'ದಲ್ಲಿ

ಭಾಗವಹಿಸಿದ್ದ ಗಾಂಧೀಜಿ, ಉ.ವೇ. ಸ್ವಾಮಿನಾಥನ್ ಅವರ ಭಾಷಣವನ್ನು ಕೇಳಿ ಪ್ರಭಾವಿತರಾಗಿ, 'ಈ ಹಿರಿಯ ವಿದ್ವಾಂಸರ ಮಾರ್ಗದರ್ಶನದಲ್ಲಿ ತಮಿಳು ಭಾಷೆಯನ್ನು ಕಲಿಯುವ ಇಚ್ಛೆ ನನಗಿದೆ' ಎಂದಿದ್ದರು. 1916ರಲ್ಲಿ ಮದ್ರಾಸ್ನಲ್ಲಿ ನಡೆದ ಸಭೆಯ ಅಧ್ಯಕ್ಷತೆ ವಹಿಸಿದ್ದ ಅವರು, 'ಮಾತೃಭಾಷಾ ಶಿಕ್ಷಣ ವ್ಯವಸ್ಥೆ ಜಾರಿಯಾಗದಿದ್ದರೆ, ಭಾರತ ಅಭಿವೃದ್ಧಿ ಹೊಂದುವುದಿಲ್ಲ. ನಾವು ಸ್ವಯಂ ಆಡಳಿತ ನಡೆಸಲು ಕಷ್ಟವಾಗುತ್ತದೆ' ಎಂದಿದ್ದರು. ತಮಿಳುನಾಡಿನಲ್ಲಿ ತಮಿಳು ಮಾತೃಭಾಷಾ ಶಿಕ್ಷಣ ವ್ಯವಸ್ಥೆ ಹೆಚ್ಚು ಗಟ್ಟಿಯಾಗಲು ಅವರ ಈ ಮಾತೇ ಪ್ರೇರಣೆಯಾಯಿತು.

1919ರಲ್ಲಿ ಬ್ರಿಟಿಷ್ ಸರ್ಕಾರ ಜಾರಿ ಮಾಡಿದ 'ರೌಲತ್ ಚಳವಳಿ' ವಿರುದ್ಧದ ಆಂದೋಲನದಲ್ಲಿ ಭಾಗವಹಿಸಲು ಮದ್ರಾಸ್ಗೆ ಬಂದಿದ್ದಾಗ ರಾಜಾಜಿ ಅವರ ಮನೆಯಲ್ಲಿ ಸಮಾಲೋಚನಾ ಸಭೆ ನಡೆದಿತ್ತು. ಹಲವು ವಿದ್ವಾಂಸರು, ಅಭಿಮಾನಿಗಳು ಭಾಗವಹಿಸಿದ್ದರು. 'ಮಾನ್ಯ ಗಾಂಧೀಜಿಯವರೇ, ಈ ಸಂಜೆ ಒಂದು ಸಾರ್ವಜನಿಕ ಸಭೆ ಏರ್ಪಡಿಸಲಾಗಿದೆ. ನೀವು ಅದರ ಅಧ್ಯಕ್ಷತೆ ವಹಿಸಿಕೊಳ್ಳಲು ಸಾಧ್ಯವೇ?' ಎಂದು ವ್ಯಕ್ತಿಯೊಬ್ಬರು ಕೇಳಿಕೊಂಡಿದ್ದರು. 'ನಿಗದಿತ ಕೆಲಸವಿದೆ. ನಾಳೆ ನಿಮ್ಮ ಸಭೆಯನ್ನು ಇಟ್ಟುಕೊಳ್ಳಬಹುದೇ?' ಎಂದು ಗಾಂಧೀಜಿ ಕೇಳಿದಾಗ, 'ಅದು ಸಾಧ್ಯವಿಲ್ಲ. ಯೋಜಿಸಿದಂತೆ ಸಭೆ ನಡೆಯಬೇಕಿದೆ. ತಾವು ಪ್ರಾರಂಭಿಸಿರುವ ಚಳವಳಿಯನ್ನು ನಾನು ಅಭಿನಂದಿಸುತ್ತೇನೆ' ಎಂದು ಹೇಳಿ ಹೊರಟು ಹೋಗಿದ್ದರು. ಅವರು ಹೋದ ನಂತರ ಕುತೂಹಲದಿಂದ ಗಾಂಧೀಜಿ, 'ಅವರು ಯಾರು' ಎಂದು ರಾಜಾಜಿ ಅವರನ್ನು ಕೇಳಿದಾಗ, 'ಅವರು ತಮಿಳುನಾಡಿನ ಕ್ರಾಂತಿಕಾರಿ ಕವಿ ಸುಬ್ರಹ್ಮಣ್ಯ ಭಾರತೀಯಾರ್' ಎಂದು ರಾಜಾಜಿ ಹೇಳಿದರು. 'ಹೌದಾ... ಇವರನ್ನು ತುಂಬ ಸುರಕ್ಷಿತವಾಗಿ ಕಾಪಾಡಿಕೊಳ್ಳುವುದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಬೇಕು' ಎಂದು ಗಾಂಧೀಜಿ ಹೇಳಿದ್ದರು. ಇದು ಭಿನ್ನಾಭಿಪ್ರಾಯಗಳ ನಡುವೆ ಕೂಡ ಮನುಷ್ಯಪರ ನಿಲುವಿನ ಬಗ್ಗೆ ಅವರಿಗಿದ್ದ ಕಾಳಜಿಗೆ ದ್ಯೋತಕ.

1921ರಲ್ಲಿ ಗಾಂಧೀಜಿ ಅವರು ತಮಿಳುನಾಡಿಗೆ ಬಂದಿದ್ದಾಗ, ಮಧುರೆಗೆ ರೈಲಿನಲ್ಲಿ ಪ್ರಯಾಣಿಸಿದ್ದರು. ದಾರಿಯಲ್ಲಿ ಬಹುಪಾಲು ಜನಸಾಮಾನ್ಯರು ಸೊಂಟದಲ್ಲಿ



ಒಂದು ತುಂಡು ಬಟ್ಟೆಯನ್ನು ಮಾತ್ರ ಧರಿಸಿ ದುಡಿಯುತ್ತಿದ್ದ ದೃಶ್ಯವನ್ನು ಕಂಡಿದ್ದರು. ಈ ಮುಂಚೆ ಉದ್ದವಾದ ಪಂಚೆ, ಮೇಲಂಗಿ, ತಲೆಗೆ ದೊಡ್ಡಪೇಟವನ್ನು ಧರಿಸುತ್ತಿದ್ದ ಗಾಂಧೀಜಿ, ನನ್ನ ದೇಶದ ಬಹುಸಂಖ್ಯಾತ ಜನಸಾಮಾನ್ಯರಿಗಿಲ್ಲದ ತುಂಬು ಬಟ್ಟೆ ನನಗೂ ಬೇಡ ಎಂದು ಅದನ್ನು ಕಳಚಿ, ಸೊಂಟಕ್ಕೆ ಒಂದು ಕಚ್ಚೆಪಂಚೆ, ಮೇಲೊಂದು ದುಪ್ಪಟಿಯನ್ನು ಹೊದ್ದುಕೊಳ್ಳುವ ಬಹುದೊಡ್ಡ ಚಾರಿತ್ರಿಕ ನಿರ್ಧಾರವನ್ನು ಮಾಡಿದರು. ಇಂದು ಪ್ರಪಂಚದಾದ್ಯಂತ ಪ್ರಸಿದ್ಧವಾಗಿರುವ ಗಾಂಧೀಜಿಯವರ ಈ ಸರಳ ಉಡುಪಿಗೆ ತಮಿಳುನಾಡಿನ ಜನಸಾಮಾನ್ಯರ ಬದುಕು ಪ್ರೇರಣೆ.

ವಿಶ್ವಪ್ರಸಿದ್ಧ ಮಧುರೆ ಮೀನಾಕ್ಷಿ ಅಮ್ಮನವರ ದೇವಾಲಯಕ್ಕೆ ಬರಲು ಅಭಿಮಾನಿಗಳು ಗಾಂಧೀಜಿಯವರನ್ನು ಕೋರಿದ್ದರು. ತಮಿಳುನಾಡಿನ ಪ್ರಸಿದ್ಧ ಕುಟ್ರಾಲ ಜಲಪಾತದಲ್ಲಿ ಮಿಂದು, ಅದರ ಪಕ್ಕ ಇರುವ ದೇವಸ್ಥಾನದಲ್ಲಿ ಪೂಜೆ ಮಾಡಲು ಅಭಿಮಾನಿಗಳು ಒತ್ತಾಯಿಸಿದ್ದರು. ಹರಿಜನ ಬಾಂಧವರಿಗೆ ಅಲ್ಲಿ ಪ್ರವೇಶವಿಲ್ಲವೆಂದು ಗೊತ್ತಾದಾಗ, ಅಲ್ಲಿಗೆ ಹೋಗಲು ನಿರಾಕರಿಸಿದ್ದರು. ಆದರೆ, ಸಾವಿರಾರು ಅಭಿಮಾನಿಗಳು ಹೋರಾಟ ಮಾಡಿ, ಗಾಂಧೀಜಿಯವರ ಇಚ್ಛೆಯಂತೆ ದೇವಾಲಯ ಪ್ರವೇಶಕ್ಕೆ ಹರಿಜನರಿಗೆ ಅವಕಾಶ ಕಲ್ಪಿಸಿದರು. ಆಗ ಗಾಂಧೀಜಿ ಹರಿಜನರೊಂದಿಗೆ ದೇವಾಲಯ ಪ್ರವೇಶಿಸಿ, ತಮಿಳುನಾಡಿನ ಜನರ ಹೋರಾಟದ ಮನೋಭಾವವನ್ನು ಪ್ರಶಂಸಿಸಿದ್ದರು.

ಮುಂಬೈ ಕರ್ನಾಟಕ, ಹೈದರಾಬಾದ್ ಕರ್ನಾಟಕ, ಮೈಸೂರು ಪ್ರಾಂತ್ಯ ಸೇರಿದಂತೆ ಕರ್ನಾಟಕದಲ್ಲಿ ಗಾಂಧೀಜಿಯವರು 1915ರಿಂದ 1937ರವರೆಗೆ 16 ಸಲ ಪ್ರವಾಸ ಮಾಡಿದ್ದರು. ಇನ್ನೂರಕ್ಕೂ ಹೆಚ್ಚು ಪ್ರದೇಶಗಳಿಗೆ ಭೇಟಿ ನೀಡಿದ್ದರು. 1915ರಲ್ಲಿ ಗೋಖಲೆಯವರ ಭಾವಚಿತ್ರವನ್ನು ಅನಾವರಣ ಮಾಡುವುದಕ್ಕಾಗಿ ಬೆಂಗಳೂರಿಗೆ ಬಂದಿದ್ದರು. 1927ರಲ್ಲಿ ಮೈಸೂರು ಜಿಲ್ಲೆಯಲ್ಲಿ ಪ್ರವಾಸ ಮಾಡಿ ತಗಡೂರು, ಬದನವಾಳು ಖಾದಿ ನೂಲು ತಯಾರಿಕಾ ಕೇಂದ್ರಗಳನ್ನು ಸಂದರ್ಶಿಸಿದ್ದರು. ಅಲ್ಲಿ ಖಾದಿ ನೂಲುತ್ತಿದ್ದವರಲ್ಲಿ ಹರಿಜನ ಮಹಿಳೆಯರೇ ಹೆಚ್ಚಿನ ಸಂಖ್ಯೆಯಲ್ಲಿದ್ದುದನ್ನು ಕಂಡು ಹಿಗ್ಗಿದ್ದರು.

ದಣಿವರಿಯದೆ ದೇಶವನ್ನು ಸುತ್ತುತ್ತಿದ್ದ ಗಾಂಧೀಜಿ, 1927ರಲ್ಲಿ ದಕ್ಷಿಣ ಭಾರತದ ಪ್ರವಾಸದಲ್ಲಿದ್ದಾಗ ಆರೋಗ್ಯ ಸಮಸ್ಯೆ ಎದುರಿಸಿದ್ದರು. ಗಾಂಧೀಜಿಯವರನ್ನು ಪರೀಕ್ಷಿಸಿದ ವೈದ್ಯರು ಪ್ರಶಾಂತ ಸ್ಥಳದಲ್ಲಿ ವಿಶ್ರಾಂತಿ ಪಡೆಯುವ ಅಗತ್ಯವಿದೆ ಎಂದು ತಿಳಿಸಿದ್ದರು. ರಾಜಾಜಿ ಹಾಗೂ ಗಂಗಾಧರರಾವ್ ದೇಶಪಾಂಡೆ ಅವರು ಕರ್ನಾಟಕದ ನಂದಿ ಗಿರಿಧಾಮವೇ ಸೂಕ್ತವೆಂದು ಸೂಚಿಸಿದ್ದರು. ಗಾಂಧೀಜಿ ಒಪ್ಪಿ 1927ರಲ್ಲಿ ನಲವತ್ತೈದು ದಿನ ನಂದಿಬೆಟ್ಟದಲ್ಲಿ ತಂಗಿದ್ದರು. ನಂತರ ಬೆಂಗಳೂರಿನ ಕುಮಾರ ಕೃಪಾದಲ್ಲಿ ಎಂಬತ್ತೇಳು ದಿನ, 1936ರಲ್ಲಿ ಎರಡನೆಯ ಬಾರಿ ನಂದಿ ಗಿರಿಧಾಮದಲ್ಲಿ ಇಪ್ಪತ್ತು ದಿನ ವಿಶ್ರಾಂತಿ ಪಡೆದಿದ್ದರು. ಮೈಸೂರು ಮಹಾರಾಜರ ಆಡಳಿತವು ಗಾಂಧೀಜಿ ಆತಿಥ್ಯವನ್ನು ತಮ್ಮ ಪುಣ್ಯದ ಕೆಲಸ ಎಂದು ಭಾವಿಸಿತ್ತು. ದಿವಾನರಾಗಿದ್ದ ಮಿರ್ಜಾ ಇಸ್ಮಾಯಿಲ್ ಅವರು ತುಂಬು ಆಸಕ್ತಿ ವಹಿಸಿದ್ದರು. ಆ ಅವಧಿಯಲ್ಲಿ ಗಾಂಧೀಜಿ ಪ್ರಭಾವಕ್ಕೆ ಒಳಗಾಗಿದ್ದ ಕರ್ನಾಟಕದ ಎಲ್ಲ ವರ್ಗದ, ಎಲ್ಲ ವಯೋಮಾನದ ಹಲವು ಸ್ತ್ರೀ ಪುರುಷರು ಇದೊಂದು ಸುವರ್ಣ ಅವಕಾಶ ಎಂದು ಭಾವಿಸಿ ಗಾಂಧೀಜಿಯವರನ್ನು ಭೇಟಿ ಮಾಡಿದ್ದರು. ಈ ಅಭಿಮಾನಿಗಳಲ್ಲಿ ಕೆಲವರಾದರೂ ತಮ್ಮ ವಿಲಾಸಿ ಜೀವನ ವ್ಯರ್ಥ ಎಂಬುದನ್ನು ಅರಿತು, ಸರಳ ಜೀವನಕ್ಕೆ ಪರಿವರ್ತಿತರಾದದ್ದು ಗಮನಾರ್ಹವಾದ ಸಂಗತಿ.

ಕರ್ನಾಟಕದ ಕೆಲವರು ಸಾಬರಮತಿ ಆಶ್ರಮ ಸೇರಲು ಬಯಸಿದ್ದರು. 'ನಾನು ನಿಮ್ಮೂರಿಗೆ ಬಂದು ಹರಿಜನ ಕೇರಿಯನ್ನು ಸ್ವಚ್ಛ ಮಾಡಿದ ಕೆಲಸಕ್ಕೆ ಪ್ರಾಮಾಣಿಕವಾಗಿ ಸ್ಪಂದಿಸಿದವರು ಮಾತ್ರ ನಮ್ಮ ಆಶ್ರಮಕ್ಕೆ

ಬರಬಹುದು' ಎಂದು ಗಾಂಧೀಜಿ ಹೇಳಿದ್ದರು. ಕರ್ನಾಟಕದ ವೀರಮ್ಮ ಯರೇಸೀಮೆ, ಕರಿಯಪ್ಪ ಯರೇಸೀಮೆ ದಲಿತ ದಂಪತಿ ಸಾಬರಮತಿ ಆಶ್ರಮದಲ್ಲಿ ಗಾಂಧೀಜಿಯವರ ಪ್ರೀತಿಪಾತ್ರರಾಗಿದ್ದರು. '1936ರಿಂದ 1941ನೇ ಇಸವಿಯವರೆಗೆ ಅವರ ಮಗಳಂತೆ ಇದ್ದೆನು. ಆಗ ನನ್ನ ಕೂಡ ಎಷ್ಟು ಪ್ರೇಮದಿಂದ ಇರುತ್ತಿದ್ದರೂ ದೇವರೇ ಬಲ್ಲ. ದಿನಾಲು ನನ್ನನ್ನು ನೋಡದ ವಿನಾ ಅವರಿಗೆ ಸಮಾಧಾನವಾಗುತ್ತಿದ್ದಿಲ್ಲ. ನನಗೆ ಹಿಂದಿ ಬರುತ್ತಿದ್ದಿಲ್ಲ. ತಾವೇ ರಾತ್ರಿ 9 ಗಂಟೆಗೆ ಹಿಂದಿ ಹೇಳಿಕೊಡುತ್ತಿದ್ದರು. ನನ್ನಿಂದ ಅವರು ಕನ್ನಡ ಕಲಿಯುತ್ತಿದ್ದರು' ಎಂಬ ವೀರಮ್ಮ ಅವರ ಮಾತುಗಳು ಗಾಂಧೀಜಿಯವರ ಅಂತಃಕರಣಕ್ಕೆ ಸಾಕ್ಷಿ.

ವೀರಮ್ಮ ಅವರಿಂದ ಅಲ್ಪಸ್ವಲ್ಪ ಕನ್ನಡ ಕಲಿತ ಗಾಂಧೀಜಿ ತಮ್ಮ ಆಪ್ತರಾಗಿದ್ದ ಗಂಗಾಧರರಾವ್ ಅವರಿಂದ ಇನ್ನಷ್ಟು ಕನ್ನಡ ಕಲಿತು 'ಮೋ.ಕ. ಗಾಂಧಿ' ಎಂಬ ಚಂದದ ಅಕ್ಷರದ ಕನ್ನಡ ಸಹಿಯನ್ನು ಕಲಿತಿದ್ದು, ಕನ್ನಡಿಗರ ಮೇಲೆ ಅವರಿಗೆ ಇದ್ದ ಪ್ರೀತಿಗೆ ಸಾಕ್ಷಿಯಂತಿದೆ.

ರಾಜಾಜಿಯವರ ಮಗಳು ಲಕ್ಷ್ಮಿಯು ನಂದಿಬೆಟ್ಟದಲ್ಲಿ ಗಾಂಧೀಜಿಯವರ ಸೇವೆ ಮಾಡುತ್ತಿದ್ದಾಗ, ಅಲ್ಲೇ ಇದ್ದ ಗಾಂಧೀಜಿಯವರ ಮಗ ದೇವದಾಸ್ ಗಾಂಧಿಯನ್ನು ಪ್ರೀತಿಸಿದ್ದರು. ಗಾಂಧೀಜಿಯವರಿಗೆ ವಿಷಯ ಗೊತ್ತಾಗಿ ರಾಜಾಜಿಯವರೊಂದಿಗೆ ಮಾತನಾಡಿ 1933ರಲ್ಲಿ ಸರಳವಾಗಿ ಮದುವೆ ಮಾಡಿಸಿದ್ದರು.

ಅಸ್ಪೃಶ್ಯತೆ ನಿವಾರಣೆಯ ಕೆಲಸಗಳು ದೇಶದಾದ್ಯಂತ ಎಲ್ಲಿ ನಡೆದಿದ್ದರೂ ಗಾಂಧೀಜಿ ಅಲ್ಲಿಗೆ ಧಾವಿಸಿ ಪ್ರೇರೇಪಿತರಾಗುತ್ತಿದ್ದರು. ಕುದ್ಮುಲ್ ರಂಗರಾವ್ ಅವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಸ್ಪೃಶ್ಯತೆಯ ಪಿಡುಗಿನ ವಿರುದ್ಧ ಹೋರಾಡಿ, ದಲಿತರ ಪಾಲಿಗೆ ಆಶಾಕಿರಣವಾಗಿದ್ದವರು. ತಮಗಿಂತ ಹತ್ತು ವರ್ಷ ದೊಡ್ಡವರಾಗಿದ್ದ ರಂಗರಾವ್ ಅವರ ಈ ಕೆಲಸಗಳಿಂದ ಪ್ರಭಾವಿತರಾಗಿದ್ದ ಗಾಂಧೀಜಿ, 1934ರ ಫೆಬ್ರುವರಿಯಲ್ಲಿ ಮಂಗಳೂರಿಗೆ ಭೇಟಿ ನೀಡಿದ್ದರು. ರಂಗರಾವ್ ಅವರ ಡಿಸಿಎಂ ಸಂಸ್ಥೆ ಹಾಗೂ ಅವರ ಸಮಾಧಿಗೆ ಭೇಟಿ ನೀಡಿದ್ದರು. 'ರಂಗರಾವ್ ಅವರ ರಚನಾತ್ಮಕ ಮಾನವೀಯ ಸೇವಾ ಕಾರ್ಯಗಳಿಂದ ನಾನು ಕೆಲವು ವಿಚಾರಗಳನ್ನು ಅರಿತುಕೊಂಡೆ. ಅಸ್ಪೃಶ್ಯತಾ ನಿವಾರಣೆ ಕಾರ್ಯದಲ್ಲಿ ಅವರು ನಿಜವಾಗಿಯೂ ನನ್ನ ಗುರುಗಳು' ಎಂದು ಅಂದಿನ ಸಾರ್ವಜನಿಕ ಸಭೆಯಲ್ಲಿ ಘೋಷಿಸಿದ್ದರು.

ರಾಷ್ಟ್ರಕವಿ ಎಂ.ಗೋವಿಂದ ಪೈ ಅವರು ತಮ್ಮ ಹಿರಿಯರು ಉಪಯೋಗಿಸುತ್ತಿದ್ದ ಊರುಗೋಲನ್ನು ಸ್ವಾತಂತ್ರ್ಯ ಚಳವಳಿಯಲ್ಲಿದ್ದ ಕಾಲೇಲ್ಕರ್ ಅವರಿಗೆ ಕಾಣಿಕೆಯಾಗಿ ನೀಡಿದ್ದರು. ಕಾಲೇಲ್ಕರ್ ಅವರು ಗಾಂಧೀಜಿ ನಡೆಸಿದ ದಂಡಿ ಸತ್ಯಾಗ್ರಹದಲ್ಲಿ ಪಾಲ್ಗೊಂಡಿದ್ದಾಗ, ಈ ಊರುಗೋಲನ್ನು ಗಾಂಧೀಜಿಗೆ ನೀಡಿದ್ದರು. ಐತಿಹಾಸಿಕ ದಂಡಿ ಸತ್ಯಾಗ್ರಹದಲ್ಲಿ ಗಾಂಧೀಜಿ ಹಿಡಿದು ಊರಿಕೊಂಡು ಹೋದ ಊರುಗೋಲು ಕನ್ನಡನಾಡಿನ ಗೋವಿಂದ ಪೈ ಅವರ ಮನೆತನದ ಪರಂಪರೆಯದು ಎಂಬುದು ದಕ್ಷಿಣ ಭಾರತದ ಕನ್ನಡಿಗರಿಗೆ ಬಹುಹೆಮ್ಮೆಯ ಸಂಗತಿ.

ಹೀಗೆ ತಮ್ಮ ಬಹು ತಿಳಿವಳಿಕೆ, ಗಾಢವಾದ ಅನುಭವ, ಅಗಾಧವಾದ ಮಾನವ ಪ್ರೀತಿ, ತೀಕ್ಷ್ಣವಾದ ಚಿಂತನೆಗಳಿಂದ ನೈತಿಕ ಮೌಲ್ಯಗಳ ಬೀಜವನ್ನು ಬಿತ್ತುತ್ತ ಅಹಿಂಸೆ–ಸತ್ಯಾಗ್ರಹದಂತಹ ಮಹತ್ವದ ಶಕ್ತಿಗಳನ್ನು ಪ್ರಪಂಚಕ್ಕೆ ತೋರಿಸಿದ ಮಹಾನ್ ಶಕ್ತಿ ಗಾಂಧೀಜಿ. ಇಂತಹ ಶಕ್ತಿಯು ದಕ್ಷಿಣ ಭಾರತದ ಮೇಲೆ ತನ್ನ ಗಾಢವಾದ ಪ್ರಭಾವವನ್ನು ಬೀರಿರುವುದು ಅವಿನಾಭಾವ ಸಂಬಂಧದ ದ್ಯೋತಕವೇ ಆಗಿದೆ.

**ಕೇರಳ, ಆಂಧ್ರ ಪ್ರದೇಶದಲ್ಲಿ ಹೆಜ್ಜೆಗುರುತು...**

ಶ್ರೇಣೀಕೃತ ಜಾತಿವ್ಯವಸ್ಥೆಯ ಭೀಕರ ಸ್ಥಿತಿಯಲ್ಲಿದ್ದ ಕೇರಳ ರಾಜ್ಯಕ್ಕೆ ಗಾಂಧೀಜಿ ಐದು ಸಲ ಪ್ರವಾಸ ಮಾಡಿದ್ದರು. ಅಲ್ಲಿ ಅಸ್ಪೃಶ್ಯತೆಯನ್ನು ಹೋಗಲಾಡಿಸಲು ಕ್ರಾಂತಿಯನ್ನೇ ಮಾಡಿದ ನಾರಾಯಣಗುರುಗಳ ಸಮಾಜ ಸುಧಾರಣೆಯ ಅರಿವು ಗಾಂಧೀಜಿ ಅವರಿಗಿತ್ತು. ತಮಗಿಂತ ಸುಮಾರು ಹದಿನೈದು ವರ್ಷ ಹಿರಿಯರಾಗಿದ್ದ ನಾರಾಯಣ ಗುರುಗಳಿಂದ ಪ್ರಭಾವಿತರಾಗಿದ್ದ ಗಾಂಧೀಜಿ, 1925ರ ಮಾರ್ಚ್‌ನಲ್ಲಿ ತಿರುವನಂತಪುರದ ವರ್ಕಲದ ಬ್ರಹ್ಮಗಿರಿಮಠಕ್ಕೆ ಬಂದು ನಾರಾಯಣ ಗುರುಗಳ ದರ್ಶನ ಪಡೆದಿದ್ದರು. ಹೀಗೆ ದಕ್ಷಿಣ ಭಾರತದ ಮಾನವೀಯ ಶಕ್ತಿಗಳಿಂದಲೂ ಗಾಂಧೀಜಿ ಪ್ರಭಾವಿತರಾಗಿದ್ದುದು ವಿಶೇಷ. ಕೇರಳದ ಗಾಂಧಿ ಎಂದೇ ಹೆಸರಾಗಿರುವ ಕೆ.ಕೇಳಪ್ಪನ್ ಅವರ ನೇತೃತ್ವದಲ್ಲಿ ಗುರುವಾಯೂರು ಶ್ರೀಕೃಷ್ಣ ದೇವಾಲಯಕ್ಕೆ ಕೆಳವರ್ಗದವರ ಪ್ರವೇಶಕ್ಕಾಗಿ ನಡೆಯುತ್ತಿದ್ದ ಹೋರಾಟವನ್ನು ಗಾಂಧೀಜಿ ಬೆಂಬಲಿಸಿದ್ದರು.

ಅವಿಭಜಿತ ಆಂಧ್ರಪ್ರದೇಶಕ್ಕೆ ಗಾಂಧೀಜಿ ಹತ್ತಕ್ಕೂ ಹೆಚ್ಚು ಸಲ ಪ್ರವಾಸ ಮಾಡಿದ್ದರು. 1920ರಲ್ಲಿ ತಿರುಪತಿಗೆ ಭೇಟಿ ನೀಡಿದ್ದ ಗಾಂಧೀಜಿ ತಮ್ಮನ್ನು ಒಯ್ಯಲು ತಂದಿದ್ದ ಡೋಲಿಯನ್ನು ನಿರಾಕರಿಸಿದ್ದರು. ಹರಿಜನ ಬಂಧುಗಳೊಟ್ಟಿಗೆ ಸಾಗುವುದು ನನಗೆ ಸಂತಸದ ಕೆಲಸ ಎಂದು ಹೇಳಿ ತಮ್ಮ ಸಹಜ ನಡವಳಿಕೆಯಿಂದ ಸವರ್ಣೀಯರ ಮನಃ ಪರಿವರ್ತನೆಯ ಕೆಲಸ ಮಾಡಿದ್ದರು. ಇಷ್ಟಾಗಿಯೂ ಗಾಂಧೀಜಿಯವರ ಜೊತೆಗಿದ್ದ ಹರಿಜನರಿಗೆ ತಿರುಪತಿಯ ತಿರುಮಲ ವೆಂಕಟೇಶ್ವರಸ್ವಾಮಿ ದೇವಸ್ಥಾನಕ್ಕೆ ಪ್ರವೇಶ ನೀಡಲು ಅಲ್ಲಿನ ವ್ಯವಸ್ಥೆ ನಿರಾಕರಿಸಿತ್ತು. ಆಗ ಗಾಂಧೀಜಿ ಅಹಿಂಸಾತ್ಮಕ ಹೋರಾಟದ ಮೂಲಕ ಅಲ್ಲಿನ ವ್ಯವಸ್ಥೆಯ ಮನಃಪರಿವರ್ತಿಸುವಲ್ಲಿ ಯಶಸ್ವಿಯಾದರು. ಹೀಗೆ ಅಸ್ಪೃಶ್ಯರಾಗಿದ್ದವರಿಗೆ ತಿರುಪತಿ ದೇವಸ್ಥಾನದ ಪ್ರವೇಶ ದೊರಕಿದ್ದು ಭಾರತದಲ್ಲಿಯೇ ಚಾರಿತ್ರಿಕವಾದ ಸಂಗತಿಯಾಗಿದೆ.

ನಿಜಾಮರ ಆಡಳಿತದ ಅಂಕುಶದಲ್ಲಿದ್ದ ಹೈದರಾಬಾದ್ ಜನತೆಯು, ಗಾಂಧೀಜಿಯವರ ಸ್ವಾತಂತ್ರ್ಯ ಚಳವಳಿಯ ಪ್ರಭಾವಕ್ಕೆ ಒಳಗಾಗಿ ಧೈರ್ಯದಿಂದ ಸಂಘಟಿತವಾಗಲು ಮುಂದಾಯಿತು. ನಿಜಾಮರ ಆಡಳಿತದಲ್ಲಿ ಉರ್ದುಮಯವಾಗಿದ್ದ ಶಿಕ್ಷಣ ವ್ಯವಸ್ಥೆಯಲ್ಲಿ ಸ್ಥಳೀಯರು ಮಾತೃಭಾಷೆಯ ಶಿಕ್ಷಣದಿಂದ ವಂಚಿತರಾಗಬೇಕಾದ ಸ್ಥಿತಿ ಇತ್ತು. ಗಾಂಧೀಜಿಯವರ ಚಳವಳಿಯಿಂದ ಪ್ರೇರಣೆಗೊಂಡ ವಾಮನ್ ನಾಯಕ, ಮಾಡಪಾಟಿ ಹನುಮಂತರಾವ್, ಮುಂದಮುಲ ನರಸಿಂಗರಾವ್ ಮುಂತಾದವರು ಸೇರಿ 'ವಿವೇಕವರ್ಧಿನಿ ಶಿಕ್ಷಣ ಸಂಸ್ಥೆ'ಯನ್ನು ತೆರೆದರು. ಈ ಸಂಸ್ಥೆಯು ಹಲವು ಬಗೆಯ ಬದಲಾವಣೆಗಳಿಗೆ ದಾರಿ ಮಾಡಿಕೊಟ್ಟಿತು.

**- ಎಂ. ಎಸ್. ಶೇಖರ್..**

**(ಕೃಪೆ : ಪ್ರಜಾವಾಣಿ )**

■

# ಉಡುಪಿಯ ಕೃಷ್ಣಮಠ ಪ್ರವೇಶಕ್ಕೆ
# ಹಿಂಜರಿದ ಗಾಂಧೀಜಿ ..



ಮಹಾತ್ಮಾ ಗಾಂಧೀಜಿ ಅವರು ಉಡುಪಿ ಜಿಲ್ಲೆಗೆ ಬಂದದ್ದು ಕೇವಲ ಒಂದು ಬಾರಿ. ಅದು 1934ರ ಫೆ.25ರಂದು. ಆದರೇ ಅವರು ಅಲ್ಲಿನ ಕೃಷ್ಣಮಠಕ್ಕೆ ಹೋಗಿರಲಿಲ್ಲ. ಯಾಕೆಂದರೇ ; ಅಸ್ಪೃಶ್ಯರಿಗೆ ಪ್ರವೇಶ ಇಲ್ಲದ ದೇವಾಲಯಗಳಿಗೆ ಗಾಂಧೀಜಿ ಹೋಗುತ್ತಿರಲಿಲ್ಲ.

ಅಂದು ಮಂಗಳೂರಿನಿಂದ ಹೊರಟ ಅವರು ಮಧ್ಯಾಹ್ನ 3.30ಕ್ಕೆ ಉಡುಪಿಗೆ ಆಗಮಿಸಿದ್ದರು. ಆಗ ಇಲ್ಲಿನ ಪಾಂಗಾಳ ಮತ್ತು ಉದ್ಯಾವರ ನದಿಗಳಿಗೆ ಸೇತುವೆಗಳಿರಲಿಲ್ಲ, ನಾಲ್ಕೈದು ದೋಣಿಗಳನ್ನು ಅಕ್ಕಪಕ್ಕ ನಿಲ್ಲಿಸಿ ಅವುಗಳ ಮೇಲೆ ಮರದ ಹಲಗೆಗಳನ್ನು ಹಾಸಿ



ಜಂಗಲ್ ನಿರ್ಮಿಸಿ, ಅದರ ಮೇಲೆ ಗಾಂಧೀಜಿ ಅವರು ಪ್ರಯಾಣಿಸುತ್ತಿದ್ದ ಕಾರನ್ನು ಹೇರಿ ನದಿಗಳನ್ನು ದಾಟಿಸಲಾಗಿತ್ತು.

ಅವರನ್ನು ಉಡುಪಿಯ ಮಹಾದಾನಿ ಹಾಜಿ ಅಬ್ದುಲ್ಲಾ ಖಾನ್ ಸಾಹೇಬ್ ಅವರು ಬರ ಮಾಡಿಕೊಂಡಿದ್ದರು. ನಂತರ ಗಾಂಧೀಜಿ ಅವರು ಉಡುಪಿನಗರದ ಕಾಡಬೆಟ್ಟು ಎಂಬಲ್ಲಿನ ಖಾದಿ ಭಂಡಾರವೊಂದನ್ನು ಉದ್ಘಾಟಿಸಿದರು.

ಸಂಜೆ ಅಜ್ಜರಕಾಡು ಮೈದಾನದಲ್ಲಿ ಭಾಷಣ ಮಾಡಿದ ಅವರು, ಬಿಹಾರದಲ್ಲಿ ಆಗ ಸಂಭವಿಸಿದ್ದ ಅತೀವೃಷ್ಟಿ ಪೀಡಿತರಿಗಾಗಿ ಧನ ಸಂಗ್ರಹ ಮಾಡಿದರು. ತಮಗೆ ಬಂದಿದ್ದ ಉಡುಗೊರೆಗಳನ್ನು ಸ್ಥಳದಲ್ಲಿಯೇ ಹರಾಜು ಹಾಕಿದ್ದರು. ಇದರಿಂದ ಒಟ್ಟು 1240 ರೂಗಳು ಸಂಗ್ರಹವಾಗಿತ್ತು.

ನಂತರ ಭಾಷಣ ಮಾಡುತ್ತಾ, ಉಡುಪಿ ಕೃಷ್ಣ ಮಠದಲ್ಲಿ ಆಗಿನ್ನೂ ಚಾಲ್ತಿಯಲ್ಲಿದ್ದ ದಲಿತರಿಗೆ ಪ್ರವೇಶ ನಿಷಿದ್ಧದ ಬಗ್ಗೆ ಅಸಮಾಧಾನ ವ್ಯಕ್ತಪಡಿಸಿದ್ದರು. ಉಡುಪಿಯ ಬಗ್ಗೆ ನಾನು ಬಹಳ ಕೇಳಿದ್ದೇನೆ, ಇಲ್ಲಿನ ದೇವರು ಬ್ರಾಹ್ಮಣರಿಗೆ ಮುಖ ತಿರುಗಿಸಿ ನಿಂತಿದ್ದಾನೆ. ಕಾರಣ ಅವರು ಅಸ್ಪೃಶ್ಯರಿಗೆ ದೇವಾಲಯದೊಳಗೆ ಪ್ರವೇಶ ನೀಡುತ್ತಿಲ್ಲ. ಈ ಬಗ್ಗೆ ಜನಾಭಿಪ್ರಾಯ ಮೂಡಿಸಬೇಕು ಎಂದವರು ಸಾರ್ವಜನಿಕವಾಗಿ ಕರೆ ನೀಡಿದ್ದರು.

ಅಸ್ಪೃಶ್ಯರಿಗೆ ದೇವಾಲಯದ ಬಾಗಿಲು ತೆರೆದರೇ ಸಾಲದು, ದೇವಾಲಯಕ್ಕೆ ಹೋಗುವುದಕ್ಕೆ ಅವಕಾಶ ಇರುವವರು ದಲಿತರು ತಮ್ಮೊಂದಿಗೆ ದೇವಾಲಯಕ್ಕೆ ಬರಬೇಕು ಎನ್ನುವ ಮನೋಭಾವನೆ ಹೊಂದಿರಬೇಕು. ಹಾಗಾದಾಗ ಮಾತ್ರ ಅದುವರೆಗೆ ಅವರು ಮಾಡಿದ ತಪ್ಪಿಗೆ ಆತ್ಮಶುದ್ಧಿಯಾಗುತ್ತದೆ ಮತ್ತು ಅಸ್ಪೃಶ್ಯರಿಗೆ ಆಗಿರುವ ಅನ್ಯಾಯಕ್ಕೆ ಪರಿಹಾರ ನೀಡಿದಂತಾಗುತ್ತದೆ ಎಂದವರು ಹೇಳಿದ್ದರು.

ಉಡುಪಿಯಲ್ಲಾದ ಈ ಬದಲಾವಣೆಯಿಂದ ಅಸ್ಪೃಶ್ಯರ ಹೋರಾಟ ಇಮ್ಮಡಿಯಾಗಬೇಕು ಮತ್ತು ಉಡುಪಿ ಇಡೀ ಕರ್ನಾಟಕಕ್ಕೆ ಮಾದರಿಯಾಗಬೇಕು ಎಂದವರು ಆಶಿಸಿದ್ದರು. ಸಭೆ ಮುಗಿದು ಗಾಂಧೀಜಿ ಅವರು ಕಾರಿನಲ್ಲಿ ಕೃಷ್ಣ ಮಠದ ಪಕ್ಕದ ರಸ್ತೆಯಿಂದ ಹಾದು ಹೋದರೂ ಕೃಷ್ಣಮಠಕ್ಕೆ ಭೇಟಿ ನೀಡಲಿಲ್ಲ, ಪಕ್ಕದಲ್ಲಿ ಕುಳಿತಿದ್ದ ಹಾಜಿ ಅಬ್ದುಲ್ಲಾ ಅವರಿಗೆ ಇದೇ ಏನು ಕೃಷ್ಣ ಮಠ ಎಂದು ಕೇಳಿದರು. ಹಾಜಿ ಅಬ್ದುಲ್ಲಾ ಮೌನವಾಗಿ ತಲೆಯಲ್ಲಾಡಿಸಿದ್ದರು ಎಂದು ಹರಿಜನ ಪತ್ರಿಕೆಯಲ್ಲಿ ವರದಿ ಮಾಡಲಾಗಿತ್ತು.

ಉಡುಪಿಯಿಂದ ಬ್ರಹ್ಮಾವರಕ್ಕೆ ಬಂದ ಗಾಂಧೀಜಿ ಅಲ್ಲಿಯೂ ತಮಗೆ ಬಂದ ಉಡುಗೊರೆಯನ್ನು ಹರಾಜು ಹಾಕಿ 312 ರೂಗಳನ್ನು ಸಂಗ್ರಹಿಸಿದರು . ನಂತರ ಕುಂದಾಪುರದಲ್ಲಿಯೂ ಅಸ್ಪೃಶ್ಯತೆ ಎಂಬ ಪಿಡುಗಿನ ಬಗ್ಗೆ ಸುಧೀರ್ಘ ಭಾಷಣ ಮಾಡಿದ್ದರು. ನಂತರ ತಮಗೆ ಬಂದ ಉಡುಗೊರೆಗಳನ್ನು ಹರಾಜು ಹಾಕಿ 400 ರೂಗಳನ್ನು ಬಿಹಾರದ ಅತೀವೃಷ್ಟಿ ಪರಿಹಾರ ನಿಧಿಗೆ ಸಂಗ್ರಹಿಸಿದ್ದರು,

ಅಂದು ರಾತ್ರಿ ಕುಂದಾಪುರದ ಶಾಂತಿನಿಕೇತನ ಎಂಬ ಮನೆಯಲ್ಲಿ ಉಳಿದುಕೊಂಡಿದ್ದ ಅವರು, 26ರಂದು ಮುಂಜಾನೆ ಅಲ್ಲಿಯೇ ಬೆಳಿಗ್ಗೆ ಪ್ರಾರ್ಥನಾಸಭೆಯಲ್ಲಿ ಭಾಗವಹಿಸಿದ್ದರು. ಆದರೇ ನಂತರ ಇಡೀ ದಿನ ಮೌನ ವ್ರತ ಆಚರಿಸಿದರು, ಯಾರೊಂದಿಗೂ ಮಾತನಾಡಿಲಿಲ್ಲ. ಮರುದಿನ 27ರಂದು ಮುಂಜಾನೆ ಕುಂದಾಪುರದಿಂದ ದಯಾವತಿ ಎಂಬ ಉಗಿಹಡಗಿನಲ್ಲಿ (ಸ್ಟೀಮರ್) ಕಾರವಾರಕ್ಕೆ ತೆರಳಿದರು ■



# ಲ್ಯಾರಿ ಬೇಕರ್ :
## ಗಾಂಧಿ ಪ್ರಭಾವದ ಸರಳ ಮನೆಗಳ ಜನಕ ..

**'ಪಶ್ಚಿಮದಲ್ಲಿ ಹುಟ್ಟಿ ಬೆಳೆದು, ಶಿಕ್ಷಣ ಕಲಿತು, ಪದವಿ ಸಂಪಾದಿಸಿದವನಾಗಿ, ನಾನು ಮೊದಮೊದಲು ಗಾಂಧಿಯವರ ಆದರ್ಶ ಅತಿಯಾಯಿತು ಎಂದು ಭಾವಿಸಿದ್ದೆ, ಈಗ ಎಪ್ಪತ್ತರ ಹರೆಯದಲ್ಲಿ, ನಲವತ್ತು ವರ್ಷದ ಅನುಭವದ ಮೇಲೆ ನಾನು ತೀರ್ಮಾನಕ್ಕೆ ಬಂದಿದ್ದೇನೆ, ಅವರೇ ಸರಿ, ಅಕ್ಷರಶಃ ಶಬ್ಧಕ್ಕೆ ಶಬ್ಧ ಸರಿ.'**

ಹೀಗೆ ತನ್ನ ಆತ್ಮಕಥೆಯಲ್ಲಿ ಬರೆದದ್ದು ಬ್ರಿಟಿಷ್ ವಾಸ್ತುಶಿಲ್ಪಜ್ಞ (architect) ಲಾರೆನ್ಸ್ ವಿಲ್ಫ್ರೆಡ್ ಬೇಕರ್.

ಬೇಕರ್ ಅವರು 1937 ರಲ್ಲಿ ಮುಂಬಯಿಯಲ್ಲಿ ಗಾಂಧೀಜಿಯನ್ನು ಭೇಟಿಯಾದಾಗಿನ ಸಂದರ್ಭವನ್ನು ಹೀಗೆ ಬರೆದಿದ್ದಾರೆ : 'ಭಾರತ ಮತ್ತು ಚೀನಾಗಳ ಜನಜೀವನದ ಬಗ್ಗೆ ಗಾಂಧೀಜಿಯವರೊಂದಿಗೆ ಮಾತನಾಡುವುದು ಒಂದು ರೋಚಕ ಅನುಭವ. ಅವರ ಆಶೀರ್ವಾದ ನನಗೆ ದೊರಕಿತು. ಅವರಿಂದ ಪ್ರಭಾವಿತನಾದ ಬ್ರಿಟಿಷನಾದ ನಾನು ಭಾರತಕ್ಕೆ ಬಂದು ಕೆಲಸ ಮಾಡುವ ನನ್ನ ಮನಸ್ಸಿನ ಇಚ್ಛೆಯನ್ನು ವ್ಯಕ್ತಪಡಿಸಿದೆ. ಅವರು ಆಶೀರ್ವದಿಸಿ ಬಾ ಎಂದು ಪ್ರೋತ್ಸಾಹಿಸಿದರು.'

ಲಾರೆನ್ಸ್ ಬೇಕರ್ 1945 ರಲ್ಲಿ ವಾಪಸ್ಸು ಭಾರತಕ್ಕೆ ಬಂದರು. ಮೊದಲು ಉತ್ತರಾಖಂಡದ ಪಿತೋರಘರ್ ನಲ್ಲಿ ಕುಷ್ಠರೋಗದ ಆಸ್ಪತ್ರೆಗಳನ್ನು ಕಟ್ಟಿಸುತ್ತ ಹದಿನಾರು ವರ್ಷ ದುಡಿದರು. ಆ ನಂತರ ಕೇರಳದ ಗುಡ್ಡುಗಾಡು ಜನರ ಕೆಲಸ ಮಾಡಲು ಪೀರುಮೇಡುಗೆ ಹೋದರು. 1970 ರಲ್ಲಿ ತಿರುವನಂತಪುರಕ್ಕೆ ಹೋದರು. 1984 ರಲ್ಲಿ ಅವರು ಗ್ರಾಮ ಪುನರುದ್ಧಾರಕ್ಕೆ ಕಡಿಮೆ ಖರ್ಚಿನ ಗೃಹನಿರ್ಮಾಣಕ್ಕಾಗಿ ವಿಜ್ಞಾನ–ತಂತ್ರಜ್ಞಾನಗಳ ಕೇಂದ್ರವನ್ನು ಸ್ಥಾಪಿಸಿದರು. ಅವರು ತಮ್ಮ ತೊಂಭತ್ತನೆ ವಯಸ್ಸಿನಲ್ಲಿ ಎಪ್ರಿಲ್ 1, 2007 ರಂದು ನಿಧನರಾದರು.

ಇವರು ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ಮಣ್ಣಿನ ಗೋಡೆ, ಸಗಣಿ, ಲ್ಯಾಟರೈಟ್ ಕಲ್ಲು, ಬೊಂಬು ಬಳಸಿ ಕಡಿಮೆ ಖರ್ಚಿನ ಕಟ್ಟಡಗಳನ್ನು ಕಟ್ಟಿದರು. ಇವರ ಕಟ್ಟಡಗಳ ಶೈಲಿಗೆ 'ಸಾವಯವ' ವಾಸ್ತುಶಿಲ್ಪ ಶೈಲಿ ಎಂಬ ಹೆಸರಿದೆ. ಇವರನ್ನು 'ಭಾರತದ ವಾಸ್ತುಶಿಲ್ಪದ ಆತ್ಮಸಾಧಕ' ಎಂದು ಪ್ರಶಂಸಿಸಲಾಗಿದೆ. ದುರದೃಷ್ಟವೆಂದರೆ ಇವರ ಯಾವ ಕಟ್ಟಡವನ್ನು ನೋಡಲೂ ಗಾಂಧೀಜಿ ಇರಲಿಲ್ಲ. ಇದ್ದರೆ ತುಂಬ ಖುಷಿಪಡುತ್ತುದ್ದರು.

ಲಾರೆನ್ಸ್ ಬೇಕರ್ ಒತ್ತಿ ಹೇಳಿದರು, "ನಮ್ಮ ದೇಶದ ಕಟ್ಟಡಗಳ ಅಗತ್ಯಗಳ ಬಗ್ಗೆ ಲೋಕಜ್ಞಾನದಿಂದ ಮಾತನಾಡಿದ ನಾಯಕ ಗಾಂಧೀಯೊಬ್ಬರೇ ಎಂದು ನನ್ನ ನಂಬಿಕೆ. ಅವು ಹೇಳಿದ ಮಾತುಗಳಲ್ಲಿ ನನ್ನ ಮೇಲೆ ಇತರರಿಗಿಂತಲೂ ಹೆಚ್ಚು ಪ್ರಭಾವ ಬೀರಿದ ಮಾತೆಂದರೆ, ಆದರ್ಶ ಗ್ರಾಮದಲ್ಲಿ ಆದರ್ಶ ಮನೆ ಕಟ್ಟಬೇಕಾದರೆ, ಅದು ಮೈಲಿ ಫಾಸಲೆಯಲ್ಲಿ ಸಿಗುವ ವಸ್ತುಗಳಿಂದ ಆಗಿರಬೇಕು. ಕಟ್ಟಡ ರಚನಾತಂತ್ರದ ಬಗ್ಗೆ ಗಾಂಧೀಯವರಿಗಿಂತ ಸ್ಪಷ್ಟ ವಿವರಣೆ ಇನ್ನಾವುದುಂಟು?

(ಸೌಜನ್ಯ : ನಜರತ್ ಅಲೆನ್ ಪಾಸ್ಕಲ್ ಅವರ ಅಮೋಘನಾಯಕ ಗಾಂಧಿ ಪುಸ್ತಕ)

■

# ಗಾಂಧಿ ಮತ್ತು ಕರ್ನಾಟಕ

ಭಾಗ – 11

ಗಾಂಧಿ ಮತ್ತು ಕರ್ನಾಟಕದ ನಡುವೆ ಒಂದು ಮಧುರ ಸಂಬಂಧವಿದೆ. ಕರ್ನಾಟಕದ ಜೊತೆಗಿನ ಗಾಂಧೀಜಿಯವರ ಒಡನಾಟ ಮತ್ತು ಸಂಬಂಧವನ್ನು ಇತ್ತೀಚಿನ ಪೀಳಿಗೆಯ ಓದುಗರಿಗೆ ತಲುಪಿಸುವ ಉದ್ದೇಶ ನಮ್ಮದು. ಅದಕ್ಕಾಗಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಂಸ್ಥೆಯ ಪ್ರಕಟಣೆಯಾದ **"ಗಾಂಧಿ ಮತ್ತು ಕರ್ನಾಟಕ"** ಕೃತಿಯನ್ನು ಸರಣಿ ಮಾದರಿಯಲ್ಲಿ ಪ್ರತಿ ತಿಂಗಳು ಬಾಪು ಪ್ರಪಂಚ ಪತ್ರಿಕೆಯಲ್ಲಿ ಪ್ರಕಟಿಸುತ್ತಿದ್ದೇವೆ.



ಭಾರತದ ಸ್ವಾತಂತ್ರ್ಯ ಚಳವಳಿಗೆ ಕರ್ನಾಟಕದ ಕೊಡುಗೆ ಅಪಾರವಾದುದು,ಅದರಲ್ಲಿಯೂ ವಿದುರಾಶ್ವಥ ದುರಂತ, ಶಿವಪುರ ಧ್ವಜ ಸತ್ಯಾಗ್ರಹ ಹಾಗೂ 1982ರ ನಂತರದ (ಮೈಸೂರು ಚಲೋ ಚಳವಳಿಗಳು) ಕರ್ನಾಟಕದ ಕೊಡುಗೆಯೆಂದೆ ಭಾವಿಸುವ ಮಹತ್ವಪೂರ್ಣ ಘಟನೆಗಳಾಗಿ ಇತಿಹಾಸದಲ್ಲಿ ದಾಖಲಾಗಿವೆ . ಅದಲ್ಲದೆ ಗಾಂಧೀಜಿಯವರು ವಿಶ್ರಾಂತಿಗಾಗಿ ಕರ್ನಾಟಕದ ನಂದಿ ಗಿರಿಧಾಮವನ್ನು ಆಯ್ಕೆ ಮಾಡಿಕೊಂಡಿದ್ದು ಕರ್ನಾಟಕದ ಸುದೈವ. ಅಲ್ಲಿ ಅವರ ಆರೋಗ್ಯ ಸುಧಾರಿಸಿದ್ದು. ಗಾಂಧೀಜಿಯವರು ಕರ್ನಾಟಕಕ್ಕೆ 1915ರಿಂದ 1937ರ ಅವಧಿಯಲ್ಲಿ 19 ಸಲ ಆಗಮಿಸಿದ್ದಾರೆ. ಅವರು ಅಸಹಕಾರ ಆಂದೋಲನಕ್ಕಾಗಿ, ಖಾದಿ ಸ್ವದೇಶಿ ಆಂದೋಲನಕ್ಕಾಗಿ, ಕಾಂಗ್ರೆಸ್ ಅಧಿವೇಶನಕ್ಕಾಗಿ, ನಿಧಿ ಸಂಗ್ರಹಕ್ಕಾಗಿ, ಖಾದಿ ಪ್ರಚಾರಕ್ಕಾಗಿ, ಹರಿಜನ ನಿಧಿ ಸಂಗ್ರಹಕ್ಕಾಗಿ, ಹುದಲಿ ಸಮ್ಮೇಳನಕ್ಕಾಗಿ ಕರ್ನಾಟಕದ ನಾನಾ ಭಾಗಗಳಲ್ಲಿ ಪ್ರವಾಸ ಕೈಗೊಂಡಿದ್ದಾರೆ. ಈ ಎಲ್ಲಾ ದಾಖಲೆಗಳನ್ನು ಗಾಂಧೀಜಿಯವರೇ ಸ್ವತಃ ತಮ್ಮ ' ಹರಿಜನ ' ಮತ್ತು ' ಯಂಗ್ ಇಂಡಿಯಾ ' ಪತ್ರಿಕೆಗಳಲ್ಲಿ 1924, 1927, 1936, ಹಾಗೂ 1937ರ ಅವಧಿಯಲ್ಲಿ ಪ್ರಕಟಿಸಿದ್ದಾರೆ.

ಈ ಸಮಗ್ರ ದಾಖಲೆಗಳು ' ಗಾಂಧೀ ಮತ್ತು ಕರ್ನಾಟಕ ' ಕೃತಿಯಲ್ಲಿ ದಾಖಲಾಗಿವೆ. ಹಾಗೂ ಕರ್ನಾಟಕದ ಅಂದಿನ ಮುಂಚೂಣಿ ನಾಯಕರ ಪತ್ರ ವ್ಯವಹಾರಗಳು ಅಂದಿನ ಛಾಯಾಚಿತ್ರಗಳು ಸಹ ದಾಖಲಾಗಿವೆ. ಅಂದಿನ ಸ್ವಾತಂತ್ರ್ಯ ಹೋರಾಟಗಾರರ ನೆನಪುಗಳು ಕೂಡಾ ಈ ಕೃತಿಯಲ್ಲಿ ಸೇರ್ಪಡೆಯಾಗಿವೆ. ಅಲ್ಲದೆ ಕರ್ನಾಟಕಕ್ಕೆ ಗಾಂಧೀಜಿಯವರು ಬಂದಿದ್ದ ಹಾಗೂ ನಡೆದ ಘಟನೆಗಳ ಅವಲೋಕನವನ್ನು ಸ್ವಾತಂತ್ರ್ಯ ಹೋರಾಟಗಾರರು ತಮ್ಮ ನೆನಪಿನ ಬುತ್ತಿಯಿಂದ ತೆಗೆದಿಟ್ಟಿದ್ದಾರೆ. ಅವುಗಳೆಲ್ಲವನ್ನೂ ಸಿದ್ದವನಹಳ್ಳಿ ಕೃಷ್ಣಶರ್ಮರ ಮುಂದಾಳತ್ವದಲ್ಲಿ ಅಂದಿನ ಸಂಗ್ರಹಕಾರರು ಸಂಗ್ರಹಿಸಿದ್ದಾರೆ. ಕರ್ನಾಟಕದ 44 ಮಹನೀಯರು ತಮ್ಮ ನೆನಪುಗಳ ಬುತ್ತಿಯಿಂದ ಗಾಂಧೀಜಿಯವರ ಕರ್ನಾಟಕದ ಭೇಟಿಯಲ್ಲಿ ನಡೆದ ಘಟನೆಗಳನ್ನು ಸವಿಸ್ತಾರವಾಗಿ ದಾಖಲಿಸಲು ನೆರವಾಗಿದ್ದಾರೆ. ಅವರ ಮಾತುಗಳು ಇಂದಿಗೂ ಈ ಕೃತಿಯನ್ನು ಓದುವಾಗ ಒಂದು ಚಿತ್ರಣವನ್ನು ಓದುಗರ ಸ್ಮೃತಿಪಟಲದಲ್ಲಿ ಮೂಡಿಸುತ್ತವೆ.

**ಕಾಂ**ಗ್ರೆಸ್ ಅಧಿವೇಶನ ನಡೆಯುವ ದಿನ ಗಾಂಧೀಜಿ ಸ್ವಾಗತಾಧ್ಯಕ್ಷರನ್ನು ಮೊದಲೇ ಕರೆದರು. ಭಾಷಣ ಕಡಿಮೆ ಮಾಡಿ ಕೆಲಸ ಹೆಚ್ಚು ಮಾಡಬೇಕು ಎಂದು ಹೇಳಿದರು. ಇದಕ್ಕಿಂತ ಮೊದಲು ನಡೆದ ಎಲ್ಲ ಕಾಂಗ್ರೆಸ್ಸುಗಳಲ್ಲೂ ಮೂರು ದಿನಗಳಲ್ಲಿ ಕಾಂಗ್ರೆಸ್ ಕಾರ್ಯಕಲಾಪ ಎಂದೂ ಮುಗಿದಿರಲಿಲ್ಲ. 5–6 ದಿನ ನಡೆಯುತ್ತಿತ್ತು ಮೊದಲನೆಯ ದಿನ ಸ್ವಾಗತ ಭಾಷಣ, ಅಧ್ಯಕ್ಷ ಭಾಷಣ, ಇವುಗಳಲ್ಲೇ ಕಳೆದು ಹೋಗುತ್ತಿತ್ತು. ಆಮೇಲೆ ಎರಡನೆಯ ದಿನ ಇತರ ಬೇರೆ ಬೇರೆ ಭಾಷಣಗಳು, ಇದೆಲ್ಲವನ್ನೂ ತಪ್ಪಿಸಿ ಅಧಿವೇಶನವನ್ನು ಆದಷ್ಟು ಕಾರ್ಯಶೀಲವಾಗಿ ಹೇಗೆ ಮಾಡಬೇಕು. ನಿಜವಾದ ಕೆಲಸವನ್ನು ಬೇಗ ಬೇಗ ಹೇಗೆ ನಡೆಸಬೇಕು ಎಂಬುದು ಗಾಂಧೀಜಿಯ ಯೋಚನೆ.

ಗಾಂಧೀಜಿಯ ಈ ಸ್ವಭಾವ ಸ್ವಾಗತಾಧ್ಯಕ್ಷರಿಗೆ ಚೆನ್ನಾಗಿ ಗೊತ್ತು ಮೊದಲೇ ತಮ್ಮ ಸ್ವಾಗತಭಾಷಣವನ್ನು ಚಿಕ್ಕದು ಮಾಡಿಬಿಟ್ಟರು. ಕರ್ನಾಟಕದ ಬಗ್ಗೆ ಇತರ ಪ್ರಾಂತದ ಜನರಿಗೆ ಸ್ವಲ್ಪ ಮಾಹಿತಿ ಕೊಡಬೇಕಾಗಿತ್ತು. ಪೂರ್ಣ ಭಾಷಣವನ್ನು ಅವರು ಓದಲೇ ಇಲ್ಲ. ಗಾಂಧೀಜಿಯ ಅಪ್ಪಣೆಯಂತೆ ಅದರ ಸಾರಾಂಶವನ್ನು ಹೇಳಿದರು. ಅದಕ್ಕೆ 5–6 ನಿಮಿಷ ಸಾಕು ಎಂದು ಮೊದಲೇ ಗೊತ್ತಾಗಿತ್ತು. ನಿಮ್ಮ ಭಾಷಣ ಅಚ್ಚಾಗಿದ್ದರೆ ಮೊದಲು ಪ್ರತಿನಿಧಿಗಳಿಗೆ ಹಂಚಿಬಿಡಿ. ಉಳಿದವರಿಗೂ ಬಹಳ ಕಡಿಮೆ ಬೆಲೆಗೆ ಮಾರಿ ಎಂದು ಗಂಗಾಧರರಾಯರಿಗೆ ಗಾಂಧೀಜಿ ಮೊದಲೇ ಹೇಳಿದ್ದರು. ಅವರು ತಮ್ಮ ಅಧ್ಯಕ್ಷ ಭಾಷಣವನ್ನು ಅಚ್ಚು ಮಾಡಿಸಿ ತಂದಿದ್ದರು. ಅದನ್ನೂ ಹಾಗೆಯೇ ಹಂಚಿಸಿದರು. ಅವರ ಭಾಷಣವನ್ನು ಮಾರಿದ್ದರಿಂದ ಸ್ವಾಗತ ಸಮಿತಿಗೆ ಒಂದು ಸಾವಿರ ರೂಪಾಯಿಯಷ್ಟು ಹಣ ಬಂತು.

ಗಂಗಾಧರರಾಯರು ತಮ್ಮ ಆತ್ಮಕಥೆಯಲ್ಲಿ ಬರೆದ ವರ್ಣನೆ ಈಗ ನೋಡೋಣ:

"ಸಬೆಯ ಪ್ರಾರಂಭದಲ್ಲಿ ಸಂಗೀತಕ್ಕೆ ಬಹಳ ಸಮಯ ಹೋಗುತ್ತದೆ. ಸಭೆ ಆರಂಭವಾಗುವುದಕ್ಕೆ ಮೊದಲೇ ಅದನ್ನು ಪ್ರಾರಂಭಿಸಬೇಕು. ಕಾರ್ಯಕ್ರಮ ಆರಂಭವಾಗುವ ಮೊದಲು 5–11 ನಿಮಿಷಗಳಲ್ಲಿ ಒಂದು ಹಾಡನ್ನು ಹಾಡಿ ಮುಗಿಸಬೇಕು. ಸಭೆ ಆರಂಭವಾಗುವ ಮೊದಲು ಮಂಟಪದಲ್ಲಿ ಗದ್ದಲ ಆಗುತ್ತದೆ. ಹಾಡುಗಳನ್ನು ಹಾಡುತ್ತಿದ್ದರೆ ಜನರು ಸುಮ್ಮನಿರುತ್ತಾರೆ . ಇದು ಒಂದು ಲಾಭವೇ ಎಂದರು. ಅವರೇ ಕಾಂಗ್ರೆಸ್ ಅಧ್ಯಕ್ಷರಾಗಿದ್ದುದರಿಂದ ಎಲ್ಲವನ್ನೂ ಅವರ ಇಚ್ಛೆಯಂತೆ ಮಾಡಬೇಕೆಂದು ನನಗೆ ಮೊದಲಿನಿಂದಲೂ ಅನಿಸುತ್ತಿತ್ತು. ಅಂತೆಯೇ ಅವರು ಹೇಳಿದಂತೆ ಎಲ್ಲ ಕಾರ್ಯಕ್ರಮವನ್ನೂ ನಿಶ್ಚಯಿಸಿದೆ.



"ಸಭೆ ಆರಂಭವಾಗುವುದಕ್ಕೆ 10 ನಿಮಿಷ ಮೊದಲು ಮನೆ ಬಿಡುವದೆಂದು ಅವರು ಗೊತ್ತು ಮಾಡಿದ್ದರು. ಹೊರಡುವದಕ್ಕೆ ಮೊದಲು ಮನೆಯಲ್ಲಿದ್ದ ಎಲ್ಲರೂ ಸೇರಿ 10–15 ನಿಮಿಷ ಪ್ರಾರ್ಥನೆ ಮಾಡಿದರು "ವೈಷ್ಣವ ಜನತೋ" ಹಾಡು ಅವರಿಗೆ ತುಂಬ ಮೆಚ್ಚಿಗೆ, ಅವರ ಮುಖ ಆಗ ಅತ್ಯಂತ ಗಂಭೀರವಾಗಿತ್ತು. ಕಾಂಗ್ರೆಸಿನ ಅಧ್ಯಕ್ಷ ಎಂದರೆ ಎಷ್ಟು ಹೊಣೆ ಹೊರಬೇಕೋ ಅದರ ಪೂರ್ಣ ಕಲ್ಪನೆ ಅವರಿಗೆ ಬಂದಿತ್ತು. ಯಶಸ್ವಿಯಾಗಿ ಆ ಹೊಣೆಯನ್ನು ನಡೆಸಲು ದೇವರ ಪ್ರಾರ್ಥನೆ ಎಷ್ಟು ಅಗತ್ಯವೋ ಅದರ ಚಿತ್ರ ಅವರ ಮುಖದಲ್ಲಿ ಸ್ಪಷ್ಟವಾಗಿ ಮೂಡಿತ್ತು. ಪ್ರಾರ್ಥನೆ ಮುಗಿದ ನಂತರ ವಾಡಿಕೆಯಂತೆ ಹಿಂದಿನ ಕಾಂಗ್ರೆಸ್ ಅಧ್ಯಕ್ಷರು , ಕಾರ್ಯ ನಿರ್ವಾಹಕ ಮಂಡಲಿಯ ಸದಸ್ಯರು, ಕಾರ್ಯದರ್ಶಿ, ಪ್ರತಿಯೊಂದು ಪ್ರಾಂತದ ಪ್ರಮುಖ ಮುಂದಾಳುಗಳೂ ಎಲ್ಲರ ಜೊತೆಯಲ್ಲಿ ಕಾಂಗ್ರೆಸಿನ ಆಯೋಜಿತ ಅಧ್ಯಕ್ಷ ಮಂಟಪ ಪ್ರವೇಶ ಮಾಡಬೇಕು . ಗಾಂಧೀಜಿಯೂ ಹಾಗೆ ಮಾಡಿದರು. ಮಂಟಪವು ಕಿಕ್ಕಿರಿದು ತುಂಬಿತ್ತು. ಗಾಂಧೀಜಿಯ ಇಚ್ಛೆಯಂತೆ ಹಾಡು ಕೂಡ ಪ್ರಾರಂಭವಾಗಿತ್ತು. ಎಲ್ಲರೂ ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತಮೇಲೆ ಹಾಡು ಮುಗಿಯಿತು.

ನಾನು ನನ್ನ ಭಾಷಣ ಪ್ರಾರಂಭ ಮಾಡಿದೆ.

"ವಿಷಯ ನಿಯಾಮಕ ಸಮಿತಿ ಈ ಮೊದಲೇ ಸೇರಿತ್ತು. ಇಂತಿಂಥ ವಿಷಯ ಕಾಂಗ್ರೆಸ್ಸಿನ ಮುಂದೆ ಬರಬೇಕು ಎಂದು ಗೊತ್ತಾಯಿತು. ಕಾಂಗ್ರೆಸನ್ನು ಸ್ವರಾಜ್ಯ ಪಕ್ಷದವರ ಕಡೆಗೆ ಕೊಡಬೇಕು. ಪಾಟ್ನಾದಲ್ಲಿ ನಡೆದ ಕಾರ್ಯನಿರ್ವಾಹಕ ಮಂಡಲಿಯ ಸಭೆಯಲ್ಲಿ ಆದ ತೀರ್ಮಾನವನ್ನು ಪುಷ್ಟೀಕರಿಸುವುದೇ ಮುಖ್ಯ ಠರಾವು. ಇದರ ಬಗ್ಗೆ ವಿಷಯ ನಿಯಾಮಕ ಸಮಿತಿಯಲ್ಲಿ ಸಾಕಷ್ಟು ಚರ್ಚೆ, ವಾದ ವಿವಾದ ನಡೆದಿದ್ದವು. ಈ ಮುಖ್ಯ ಠರಾವನ್ನು ಸಭೆಯ ದಿವಸವೇ ಮಂಡಿಸಲಾಯಿತು. ಅದು ಅಂಗೀಕೃತ ಆಯಿತು. ಈ ಠರಾವನ್ನು ಅಂಗೀಕರಿಸುವದರಲ್ಲಿ ಗಾಂಧೀಜಿಯ ಉದ್ದೇಶ, ಕಾಂಗ್ರೆಸ್ಸಿನ ಕೆಲಸಗಳನ್ನು ಆದಷ್ಟು ಬೇಗ ಮುಗಿಸಬೇಕು ಎಂದುಹೊತ್ತಿಗೆ ಸರಿಯಾಗಿ ಎಲ್ಲ ಕೆಲಸಗಳನ್ನೂ



ಮುಗಿಸುವದರಲ್ಲೇ ಅವರಿಗೆ ಲಕ್ಷ್ಯ ಹೆಚ್ಚು . ಹೀಗಾಗಿ ಮರುದಿವಸವೇ ಅಧಿವೇಶನ ಕೆಲಸ ಮುಗಿದರೆ ಮೂರನೇ ದಿನ ಟಿಕೆಟ್ ಮಾರಾಟ ಆಗುವದಿಲ್ಲ. ಅದರಿಂದ ಬರುವ ಉತ್ಪನ್ನದಲ್ಲಿ ಕೊರತೆ ಆಗಬಹುದು ಎನಿಸಿತು. ಸ್ವಾಗತ ಸಮಿತಿಯ ಕೆಲವು ಸದಸ್ಯರಿಗೆ ಕೇವಲ ಹಣಕ್ಕಾಗಿ ಅಧಿವೇಶನವನ್ನು ಮುಂದುವರಿಸುವದು ಗಾಂಧೀಜಿಗೆ ಸಮ್ಮತ ಇರಲಿಲ್ಲ. ಗಾಂಧೀಜಿ ಇಚ್ಛೆಯಂತೆ ಅತ್ಯಂತ ಕ್ರಮಬದ್ಧವಾಗಿ ಕೆಲಸ ನಡೆದು, ಎರಡೇ ದಿನಗಳಲ್ಲಿ ಅಧಿವೇಶನ ಮುಕ್ತಾಯ . ಗಾಂಧೀಜಿ ಅವರಿಗೆ "ವೇಳೆಯ ಬೆಲೆ ಚೆನ್ನಾಗಿ ಗೊತ್ತಿತ್ತು." ಹೀಗೆ ದೇಶಪಾಂಡೆ ಗಂಗಾಧರರಾಯರು ಬರೆಯುತ್ತಾರೆ. ಕಾಂಗ್ರೆಸ್ ಅಧಿವೇಶನ ಮುಗಿದಮೇಲೆ ಗಾಂಧೀಜಿ ಹೆಚ್ಚಾಗಿಯೇ ಒಂದು ದಿನ ವಿಜಯನಗರದಲ್ಲಿ (ಬೆಳಗಾವಿಯಲ್ಲಿ ) ಇದ್ದರು. ಬೇರೆ ಬೇರೆ ಪ್ರಾಂತಗಳ ಕಾರ್ಯಕರ್ತರೊಂದಿಗೆ ವಿಚಾರ ವಿನಿಮಯ ನಡೆಸಲು ಶಿಬಿರದಲ್ಲಿ ಇದ್ದರು.

ಅಧಿವೇಶನಕ್ಕೆ 15 ದಿನ ಮೊದಲು "ಅಧಿವೇಶನ ಕೆಲಸಕ್ಕಾಗಿಯೇ ಹೊರತು ಆಡಂಬರಕ್ಕೆ ಅಲ್ಲ. ಆಡಂಬರಕ್ಕೆ ಅಥವಾ ಶೃಂಗಾರ ಪ್ರದರ್ಶನಕ್ಕೆ ಬೇರೆ ಕಾರ್ಯಕ್ರಮ ಇಟ್ಟುಕೊಳ್ಳಬೇಕು. ಅಧಿವೇಶನದ ಕಾಲ ವ್ಯರ್ಥ ಆಗಬಾರದು. ನನ್ನ ಮೆರವಣಿಗೆ ಮಾಡಬಾರದು" ಎಂದು ನಿಷ್ಠುರವಾಗಿ ಗಾಂಧೀಜಿ ಸ್ವಾಗತ ಸಮಿತಿಗೆ ತಿಳಿಸಿದ್ದರು. ಬೆಳಗಾಂವಿಗೆ ನಾಲ್ಕೈದು ದಿನ ಮೊದಲೇ ತಾವು ಬರುತ್ತಿರುವುದರಿಂದ ಆಗಿನಿಂದಲೇ ಜನರು ಗುಂಪು ಸೇರಿ ಗದ್ದಲ ಆಗುವ ಸಂಭವ ಇದೆ. ಹಾಗೆ ಜನರು ನೆರೆಯಬಾರದು ಎಂದು ಸಾರ್ವಜನಿಕವಾಗಿ "ಯಂಗ್ ಇಂಡಿಯಾ"ದಲ್ಲಿ ಮೊದಲೇ ಸೂಚನೆ ಕೊಟ್ಟಿದ್ದರು.

ಸ್ವತಃ ಗಾಂಧೀಜಿಯೇ ಅಧ್ಯಕ್ಷರಾಗಿದ್ದುದರಿಂದ ಕಾಂಗ್ರೆಸ್ಸಿನಲ್ಲಿ ಬಹುಮತ ಅಪರಿವರ್ತನವಾದಿಗಳಿಗೇ ಸಿಗುತ್ತಿತ್ತು. ಅದರಲ್ಲಿ ಎಳ್ಳಷ್ಟೂ ಸಂಶಯ ಇರಲಿಲ್ಲ. ಆದರೆ ಗಾಂಧೀಜಿ ಸತ್ಯಾಗ್ರಹಿಗಳು ಪರಿವರ್ತನವಾದಿಗಳ ಮುಖಂಡರಾದ

ಶ್ರೀ ಚಿತ್ತರಂಜನ ದಾಸ್ ಮತ್ತು ಪಂಡಿತ ಮೋತಿಲಾಲ್ ನೆಹರು ಇವರ ಸಂಗಡ ಒಪ್ಪಂದ ಮಾಡಿಕೊಂಡಿದ್ದರು. ಅದರಿಂದ ಬಹಳ ತೊಡಕಾಗಿದ್ದ ಪ್ರಶ್ನೆ ಬಗೆಹರಿದಿತು. ಈ ಒಪ್ಪಂದ ಅಧ್ಯಕ್ಷರು ಸ್ವಂತ ಜವಾಬ್ದಾರಿಯ ಮೇಲೆ ಮಾಡಿಕೊಂಡಿದ್ದು. ಅದಕ್ಕೆ ಕಾಂಗ್ರೆಸ್ ಅಧಿವೇಶನದಲ್ಲಿ ಅ.ಭಾ. ಕಾಂಗ್ರೆಸ್ ಸಮಿತಿಯ ಹಾಗೂ ಕಾಂಗ್ರೆಸ್ಸಿನ ಒಪ್ಪಿಗೆ ಬೇಕಾಗಿತ್ತು. ಬೆಳಗಾಂವ ಕಾಂಗ್ರೆಸ್ಸಿನಲ್ಲಿ ಅದು ಸಿಕ್ಕಿತು. ಮುಖ್ಯ ತತ್ವವನ್ನು ಬಿಟ್ಟುಕೊಡದಿದ್ದರೂ ವಿವರಗಳಲ್ಲಿ ಜಗಳಾಡುವ ಸ್ವಭಾವ ಅವರದಲ್ಲ. ಅದರಿಂದ ಕೆಲಸ ಕೇಡು. ವಿರುದ್ಧ ಇದ್ದರೂ ಕೂಡ ಅವರೂ ಪ್ರಾಮಾಣಿಕರೇಕೆ ಆಗಿರಬಾರದು ಎಂಬ ನಿಲುವು ಅವರದು. ಮಾಡಿಕೊಂಡ ಒಪ್ಪಂದವನ್ನು ಸ್ವಯಂಅಕ್ಷರಶಃ ಅವರು ಪಾಲಿಸಿದರು. ಇತರರೂ ಹಾಗೇ ನಡೆಯಬೇಕೆಂದು ಅವರು ಹೇಳುತ್ತಿದ್ದರು.

**ಬೆಳಗಾಂವ ಕಾಂಗ್ರೆಸ್ಸಿನಲ್ಲಿ ಅಧ್ಯಕ್ಷರ ಪ್ರಾರಂಭ ಭಾಷಣ : 26-12-1924**

ಮಹಾತ್ಮಾ ಗಾಂಧೀ ಅಧಿವೇಶನಕ್ಕೆ ಅಧ್ಯಕ್ಷರು. ಅಧ್ಯಕ್ಷರು ವೇದಿಕೆಯಿಂದ ಕೆಳಗೆ ಇಳಿದು ಭಾಷಣ ಮಾಡುವ ಸ್ಥಳಕ್ಕೆ ಬಂದರು . ಎತ್ತರವಾದ ಒಂದು ಸ್ಟೂಲಿನ ಮೇಲೆ ಕುಳಿತು, ಎದುರಿಗೆ ಗಡಿಯಾರ ಇಟ್ಟುಕೊಂಡರು. ಸ್ವಾಗತಾಧ್ಯಕ್ಷರು ಒಂದು ಗಂಧದ ಮರದ ಪೆಟ್ಟಿಗೆಯಲ್ಲಿ ಕರ್ನಾಟಕ – ಒಂದು ಕೈಪಿಡಿ (ಏಚಿಡಿಟಿಚಿಣಚಿಞಚಿ ಊಚಿಟಿಜ ಃಠಠಞ) ಎಂಬುದನ್ನು ಇಟ್ಟು ನೀಡಿದರು .

ಗಾಂಧೀಜಿಗೆ ಚಪ್ಪಾಳೆಗಳ ನಡುವೆ ಅದನ್ನು ಸ್ವೀಕರಿಸಿದರು . 10 ನಿಮಿಷ ಹಿಂದಿಯಲ್ಲಿ ಮಾತನಾಡಿದರು.

ಗಂಗಾಧರರಾಯರೇ, ಸೋದರ ಸೋದರಿಯರೇ, ನನಗೆ ನೀವು ಮಾಡಿರುವ ಗೌರವವನ್ನು ಕೆಡಿಸುವಂತೆ ದೊಡ್ಡ ಭಾಷಣ ನಾನು ಮಾಡುವದಿಲ್ಲ; ನಾನು ಹೇಳಬೇಕಾದದ್ದು ತಮಗೆ ಆಗಲೇ ಗೊತ್ತಿದೆ. ನನ್ನ ಭಾಷಣ ಹಿಂದೀ, ಕನ್ನಡ ಮರಾಠಿ ಭಾಷೆಗಳಿಗೆ ಭಾಷಾಂತರ ಆಗಿದೆ. ಇಂಗ್ಲೀಷಿನಲ್ಲಿಯೂ ಇದೆ. ನಿನ್ನೆ ಸಂಜೆಯ ಹೊತ್ತಿಗೆ ನಿಮಗೆಲ್ಲರಿಗೂ ಅದರ ಪ್ರತಿಗಳು ಸಿಗಬೇಕು ಎಂದು ಗಂಗಾಧರರಾಯರನ್ನು ಪ್ರಾರ್ಥಿಸಿದ್ದೆ. ನಿಮಗೆ ಸಿಕ್ಕಿದೆ. ನೀವು ಅದನ್ನು ಚೆನ್ನಾಗಿ ಓದಿಕೊಂಡಿದ್ದೀರಿ ಎಂದು ತಿಳಿದಿದ್ದೇನೆ.

ನಾನು ಹೇಳಬೇಕಾದದ್ದು ಇಷ್ಟೇ. 1920–21ರಲ್ಲಿ ನಾವು ಏನು ಸಾಧಿಸಬೇಕು ಎಂದಿದ್ದೆವೋ ಅದನ್ನು ಸಾಧಿಸಲಾಗಲಿಲ್ಲ. ನಮ್ಮೊಳಗೆ ಅನೈಕಮತ್ಯ ವಿರಸ ತಲೆ ಎತ್ತಿಕೊಂಡಿದೆ. ಹಿಂದೂಗಳೂ, ಮುಸ್ಲಿಮರೂ ಪರಸ್ಪರ ಶತ್ರುಗಳು ಎಂದು ತಿಳಿದುಕೊಂಡು ಶಾರೀರಿಕ ಹಿಂಸೆಯನ್ನು ಮಾಡುತ್ತಿದ್ದಾರೆ. ಇದು ಸ್ವರಾಜ್ಯ ಸಾಧನೆಗೆ ದಾರಿಯಲ್ಲ ಎಂದು ಹೇಳುವ ಅಗತ್ಯವಿಲ್ಲ. ಹಿಂದೂಗಳು ನಾವು, ಅಸ್ಪೃಶ್ಯರನ್ನು ಕೀಳಾಗಿ ಕಾಣುತ್ತೇವೆ, ಅವರನ್ನು ಮುಟ್ಟಿದರೆ ಪಾಪ ಎಂದು ತಿಳಿದಿದ್ದೇವೆ. ಇದು ದೇವರೆದುರು ಮಾಡಿದ ಮಹಾಪಾಪ. ಈಗಾಗಲೇ 3– 4 ವರ್ಷಗಳಿಂದ ದೊಡ್ಡವರು ಚಿಕ್ಕವರು ರಾಟೆ ತಿರುಗಿಸಬೇಕು ಎನ್ನುತ್ತಿದ್ದೇವೆ; ಕಾಂಗ್ರೆಸ್ಸಿನಲ್ಲಿ :

ಅ.ಭಾ.ಕಾಂಗ್ರೆಸ್ ಸಮಿತಿಯಲ್ಲಿ ರಾಟೆಯ ಮೂಲಕ ಸ್ವರಾಜ್ಯ ಸಂಪಾದನೆ ಆಗಬೇಕು ಎಂದು ಹೇಳುತ್ತಿದ್ದೇವೆ. ಈ ಚಳವಳಿಯ ಪ್ರಚಾರಕ್ಕಾಗಿ ನಾನು ಪೂನಾಕ್ಕೆ ಹೋಗಿದ್ದಾಗ, ಲೋಕಮಾನ್ಯ ತಿಲಕರು ಕೊಟ್ಟ " ಸ್ವರಾಜ್ಯ ನನ್ನ ಜನ್ಮಸಿದ್ಧ ಹಕ್ಕು" ಎಂಬುವ ವಾಕ್ಯಾರ್ಥವನ್ನು ಹೇಳಿ, ಅದನ್ನು ಪೂರ್ಣ ಮಾಡುವುದೇ ನನ್ನ ಬದುಕಿನ ಪರಮೋದ್ದೇಶ ಎಂದು ಹೇಳಿದೆ.

ನಾನು ಮತ್ತೆ ಅದನ್ನೇ ಹೇಳುತ್ತಿದ್ದೇನೆ.

ನಮಗೆ ಸ್ವರಾಜ್ಯ ಬೇಕು ಎಂದರೆ ಅದಕ್ಕೆ ದಾರಿ ರಾಟೆ, ನೂಲು, ಖಾದಿ. ಇದು ನಮಗೆ ಗೊತ್ತಿದೆ. ಆದರೆ ಅದರಂತೆ ಮಾಡುವುದಿಲ್ಲ ಎಂದು ನನಗೆ ವಿಷಾದವಾಗುತ್ತದೆ. ನನಗೆ ಬೇರೆ ಏನೂ ಗೊತ್ತಿಲ್ಲ. ಬೇರೆ ಯೋಚಿಸುವುದೂ ಇಲ್ಲ. ಸೋದರ ಸೋದರಿಯರೇ, ನಿಮ್ಮ ಎದುರಿಗೆ ನಿಂತು ಭಾಷಣ ಮಾಡುವುದು ವ್ಯರ್ಥ.

ಅದು ನಮ್ಮನ್ನು ಎಲ್ಲಿಗೂ ಒಯ್ಯುವುದಿಲ್ಲ. ನಿಮಗೂ ನನಗೂ ಅಮೂಲ್ಯವಾದ ಕಾಲಹರಣ ಮಾತ್ರ. ಏಕೆಂದರೆ ನಾನು ದೇವರ ಕಿಂಕರ ಎಂದುಕೊಂಡಿದ್ದೇನೆ. ಈ ರೀತಿ ನಮಗೆ ಸ್ವರಾಜ್ಯ ದೊರೆಯುವುದಿಲ್ಲ ಎಂದು ನಾನು ಬಲ್ಲೆ. ಬೇಗಂ ಮಹಮ್ಮದಾಲಿ ಒಂದು ಸಾರಿ ನನಗೆ ಹೇಳಿದರು, – ಕಾಂಗ್ರೆಸ್ ಅಧಿವೇಶನಕ್ಕೆ ಹೋದಾಗಲೆಲ್ಲ ಸ್ವರಾಜ್ಯ ಬಂತು ಎಂದು ಒಂದು ವಾರ ತನಗೆ ಅನಿಸುತ್ತದೆ ಎಂದು. ಎಂದರೆ ಸ್ವರಾಜ್ಯದ ನಾಟಕ ಆಡುತ್ತೇವೆ ಅಂತ , ಒಬ್ಬ ವೇಷಧಾರಿ ಹರಿಶ್ಚಂದ್ರನ ಪಾತ್ರ ಮಾಡಿದಂತೆ ಆಗುತ್ತದೆ. ಹರಿಶ್ಚಂದ್ರನ ವೇಷ ಹಾಕಿದವನು ಸತ್ಯವಂತ ಹೌದೊ ಅಲ್ಲವೋ ನಮಗೆ ತಿಳಿಯದು. ಈ ಸ್ವರಾಜ್ಯೋತ್ಸವ ಒಂದು ನಾಟಕ ಆಗಿದೆ. ಆದ್ದರಿಂದಲೇ ನಿಮಗೆ ನಾನು ಹೇಳುತ್ತೇನೆ. ದೇಶಬಂಧು ದಾಸರು ಒಂದು ಗೊತ್ತುವಳಿಯನ್ನು ಮಂಡಿಸುತ್ತಾರೆ. ನಿಮಗೆ ಇದು ಒಪ್ಪಿಗೆ ಇದ್ದರೆ ಒಪ್ಪಿಗೆ ಕೊಡಿ. ಇಲ್ಲದೆ ಇದ್ದರೆ ನಿರಾಕರಿಸಿ. ಅದರಲ್ಲಿ ಹಿಂದೂ ಮುಸ್ಲಿಂ ಐಕ್ಯದ ಮಾತು ಇಲ್ಲ; ಅಸ್ಪೃಶ್ಯತೆಯ ವಿಷಯವೂ ಇಲ್ಲ. ನಾವು ನೂಲಬಯಸುತ್ತೇವೆ ಎಂದಷ್ಟೇ ಅದರ ಮಾತು. ಇಲ್ಲಿ ಬಂದಿರುವ ಅಸ್ಪೃಶ್ಯರು , ಕ್ರಿಶ್ಚಿಯನರು, ಇತರರು ಎಲ್ಲ ಪ್ರತಿನಿಧಿಗಳಿಗೂ ನನ್ನ ಬೇಡಿಕೆ ಇಷ್ಟೇ – ನೀವು ಯಾರನ್ನು ಪ್ರತಿನಿಧಿಸಲು ಬಂದಿದ್ದೀರೋ ಅವರ ಪ್ರತಿನಿಧಿಗಳು ನಿಜವಾಗಿ ಆಗಿದ್ದರೆ, ಮಹಮದಾಲಿ ಮತ್ತು ದಾಸರ ಶಪಥವನ್ನು ನೀವು ಎತ್ತಿ ಹಿಡಿಯಬಯಸಿದರೆ ದೇವರ ಸನ್ನಿಧಿಯಲ್ಲಿ ಹೇಗೆ ಮಾಡಬೇಕೋ ಹಾಗೆ ಮಾಡಿ. ಇದು ಸರಿ ಅಲ್ಲ, ಗಾಂಧಿ ನಿಮ್ಮನ್ನು ಮೋಸಗೊಳಿಸುತ್ತಿದ್ದಾನೆ ಎನಿಸಿದರೆ ಇದನ್ನು ತಿರಸ್ಕರಿಸಿಬಿಡಿ. ಆದರೆ ನೀವು ಶಪಥಮಾಡಿದರೆ – ಈ ಗೊತ್ತುವಳಿಯನ್ನು ಒಪ್ಪಿಕೊಳ್ಳುವುದೇ ಒಂದು ಶಪಥ– ಆಮೇಲೆ ಅದರಂತೆ ಮಾಡದಿದ್ದರೆ ನಿಮ್ಮ ಹಣೇಬರಹ. ದೇಶಕ್ಕೆ ಗಾಂಧೀ ಹುಚ್ಚ ಎನಿಸಿದರೆ ಅವನನ್ನು ತಿರಸ್ಕರಿಸಿಬಿಡಿ. ಮತ್ತೊಮ್ಮೆ ಯೋಚಿಸಿ. ಭಾರತ ಸ್ವರಾಜ್ಯಕ್ಕೆ ಯೋಗ್ಯವೆ? ಪ್ರತಿಜ್ಞೆಮಾಡಿ ಅದರಂತೆ ನಡೆಯದಿದ್ದರೆ ಆ ಮನುಷ್ಯನಿಗೆ ಜಗತ್ತು ಏನನ್ನುತ್ತದೆ? ಬೈಬಲ್ ಅಥವಾ ಗ್ರಂಥ ಸಾಹಿಬ್ ಅಥವಾ ಕೊರಾನ್ ಯಾವುದನ್ನೇ ಅವನು ಓದಿದ್ದರೂ ನಿಮ್ಮ ಕಣ್ಣಿಗೆ ಆತ ಕುಷ್ಠರೋಗಿ, ಅಪ್ರಯೋಜಕ, ಖೊಟ್ಟಿ ನಾಣ್ಯ . ಖೊಟ್ಟಿ ನಾಣ್ಯವನ್ನು ಅಂಗಡಿಗೆ ತೆಗೆದುಕೊಂಡು ಹೋದರೆ ಸರಕಾರ ನಿಮ್ಮನ್ನು ಹಿಡಿದುಹಾಕುತ್ತದೆ. ನಿಮ್ಮನ್ನು ತಪ್ಪುದಾರಿಗೆ ಎಳೆಯುವ ಉದ್ದೇಶ ನನ್ನದಲ್ಲ. ನಿಮ್ಮ ಸಂಗಡ ಹುಡುಗಾಟಿಕೆ ಆಡುವುದಿಲ್ಲ. ನನಗೆ ತಿಳಿದದ್ದನ್ನು ನನಗೆ ಅನಿಸಿದ್ದನ್ನು ನಾನು ಹೇಳುತ್ತಿದ್ದೇನೆ:

ನಮ್ಮ ಕೋಟಿ ಕೋಟಿ ಜನ ಸೋದರ ಸೋದರಿಯರು ಎಲ್ಲಿಯವರೆಗೆ ರಾಟೆಯಲ್ಲಿ ವಿಶ್ವಾಸವಿಡುವುದಿಲ್ಲವೋ, ರಾಟೆಯನ್ನು ನೂಲುವುದಿಲ್ಲವೋ, ಖಾದಿಯನ್ನು ಮಾಡುವುದಿಲ್ಲವೋ ಮತ್ತು ಧರಿಸುವುದಿಲ್ಲವೋ ಅಲ್ಲಿಯವರೆಗೆ ಸ್ವರಾಜ್ಯ ಬರುವುದಿಲ್ಲವೆಂದು ನಾನು ಮನಗಂಡಿದ್ದೇನೆ. ಈ ಖಾದೀ ಕಾರ್ಯ ಅನುಷ್ಠಾನ ಆಗುವವರೆಗೆ ಭಾರತದ ಬಡತನ ನೀಗದು.

ನಮ್ಮ ಕೋಟ್ಯಂತರ ಬಡಬಗ್ಗರಿಗೆ ಹಿಟ್ಟು ದೊರೆಯುವವರೆಗೆ ನಮಗೆ ಸ್ವರಾಜ್ಯ ಇಲ್ಲ. ನಿಮಗೆ ಸ್ವರಾಜ್ಯ ಸಿಗಬೇಕಾದರೆ ಇದೇ ಕರಾರಿನ ಮೇರೆಗೆ ದೇಶಬಂಧು ದಾಸರೊಂದಿಗೆ, ಪಂಡಿತ್ ಮೋತಿಲಾಲರೊಂದಿಗೆ ನಾನು ಒಂದು ಒಪ್ಪಂದ ಮಾಡಿಕೊಂಡು, ಅದನ್ನು ಇಡೀ ದೇಶದ ಮುಂದೆ ಇಟ್ಟಿದ್ದೇನೆ. ನಾನು ಬಯಸಿದ್ದರಲ್ಲಿ ಏನೂ ತಪ್ಪಿಲ್ಲ ಎಂದು ನಂಬಿದ್ದೇನೆ. ತಾವು ಬಯಸಿದಂತೆ ಮಾಡುವ ಅವರ ಹಕ್ಕನ್ನು ಒಪ್ಪಿಕೊಳ್ಳುತ್ತೇನೆ.

ನನ್ನ ಮಟ್ಟಿಗೆ ಶಾಸನಸಭೆಗಳಿಂದ ಏನೂ ಲಾಭ ಇಲ್ಲ ಎಂದುಕೊಂಡಿದ್ದೇನೆ. ಆದರೆ ಶಾಸನಸಭೆಗಳ ಮೂಲಕ ಲಾಭ ಉಂಟು ಎಂದು ತಿಳಿದ ಅನೇಕ ಮಹಾನಾಯಕರು ಇದ್ದಾರೆ. ಏನೂ ಆಗದಿದ್ದರೂ ಶಾಸನಸಭೆಗಳಿಗಾದರೂ ಹೋಗಬಹುದಲ್ಲ ಎನ್ನುತ್ತಾರೆ ಅವರು. ನಿಜ, ಶಾಸನಸಭೆಗಳಿಗೆ ಹೋಗುವುದರಲ್ಲಿ ಪ್ರಯೋಜನ ಇದೆ ಎನಿಸಿದರೆ ಅವರಿಗೆ, ಅವರು ಹೋಗಲೇಬೇಕು ಎನ್ನುತ್ತೇನೆ. ಅವರೂ ದೇಶದ ನಾಯಕರೇ. ನಾನು ಬೇಡ ಎಂದು ಹೇಳಲು ಯಾರು ? ಹೋಗಬೇಕು ಎನ್ನುವವರು ಶಾಸನಸಭೆಗೆ ಹೋಗಲಿ ಎನ್ನುತ್ತದೆ ಒಪ್ಪಂದ. ಅಸಹಕಾರಿಗಳು ಅವರನ್ನು ಹಿಂಬಾಲಿಸ ಬೇಕು ಎಂದು ಅರ್ಥವಲ್ಲ. ಕಾಂಗ್ರೆಸ್ ಪರಿವರ್ತನ ವಾದಿಗಳಿಗೆ ಎಷ್ಟರ ಮಟ್ಟಿಗೆ ಸೊತ್ತೋ ಅಪರಿವರ್ತನವಾದಿಗಳಿಗೂ ಅಷ್ಟೇ. ಕಾಂಗ್ರೆಸ್ ಯಾರೊಬ್ಬರದೂ ಅಲ್ಲ . ಹಾಗೆ ತಿಳಿದರೆ ಅದು ತಪ್ಪು. ಆದ್ದರಿಂದ ಅವರು ಕಾಂಗ್ರೆಸ್ಸಿನ ಪರವಾಗಿ ಹೋಗುತ್ತಾರೆ. ಇದು ತಪ್ಪು ಎಂದು ಹೇಳಿದೆ. ಆದರೆ ನನ್ನದೇ ಸರಿ, ಉಳಿದವರು ತಪ್ಪು ಎಂಬ ಭಾವನೆಯು ಅಳಿಯಬೇಕು. ಜಗತ್ತಿನಲ್ಲಿ ಬೇರೆ ಬೇರೆ ಮನೋಧರ್ಮ ಇರುವವರೆಗೆ ಭಿನ್ನಾಭಿಪ್ರಾಯಗಳು ಇದ್ದೇ ಇರುತ್ತವೆ. ಆದರೆ ಸಹನೆಯನ್ನು ಹೆಚ್ಚಿಸಲು ನಾವು ಎಲ್ಲವನ್ನೂ ಅಪ್ಪಿಕೊಳ್ಳುತ್ತೇವೆ. ಇದು ಅಹಿಂಸೆಯ ಒಂದು ಅಂಗ. ಆದರೆ ನಾನು ಹೇಳಿದ ಹಾಗೆ ಇದು ಚಿಕ್ಕ ವಿಷಯ. ಈ ಪ್ರತಿಜ್ಞೆಯಲ್ಲಿ ಮುಖ್ಯ ವಿಷಯ ರಾಟೆ. ಚರಖಾಶಾಸ್ತ್ರದಲ್ಲಿ ನಿಮಗೆ ನಂಬಿಕೆ ಇಲ್ಲದಿದ್ದರೆ, ಖಾದಿಯಲ್ಲಿ ನಿಮಗೆ ಶ್ರದ್ಧೆ ಇಲ್ಲದಿದ್ದರೆ, ಈ ಹೊಸ ಮತದಾನ ಪದ್ಧತಿ ಕಾಂಗೆಸ್ಸನ್ನು ದುರ್ಬಲಗೊಳಿಸುತ್ತದೆ ಎಂದು ನಿಮಗನಿಸಿದರೆ, ರಾಟೆಯನ್ನು ಕೈಬಿಡಿ ಎನ್ನುತ್ತೇನೆ.

ಸೋದರರೇ, ಈ ಕೆಲಮಾತನ್ನು ನನ್ನ ಹರಕುಮುರುಕು ಹಿಂದಿಯಲ್ಲಿ ಹೇಳಿದ್ದೇನೆ.



ಕರ್ನಾಟಕದ, ದಕ್ಷಿಣಭಾರತದ ಕೆಲವರು ಇಂಗ್ಲೀಷಿನಲ್ಲಿ ಮಾತನಾಡಿ ಎನ್ನುತ್ತಿದ್ದೀರಿ. ಇದರಿಂದ ನನಗೆ ನೋವಾಗುತ್ತದೆ. ನಾನು ಭಾರತಕ್ಕೆ ಬಂದಾಗಿನಿಂದ ಕನಿಷ್ಠ ಪಕ್ಷ ಕಾಂಗ್ರೆಸ್ಸಿನಲ್ಲಾದರೂ ಸ್ವರಾಜ್ಯದ ಮಾತನಾಡುವಾಗ, ಹಿಂದಿಯಲ್ಲೇ ಮಾತನಾಡೋಣ ಎನ್ನುತ್ತಿದ್ದೇನೆ . ನಮ್ಮ ದುರ್ದೈವ, ನಮ್ಮ ಶಿಕ್ಷಣ ಬಹಳ ತಪ್ಪು. ಅದರ ತುಂಬ ಸೋಮಾರಿತನ ಸೇರಿಕೊಂಡಿದೆ. ಇದಕ್ಕಾಗಿ ಎಷ್ಟು ಪ್ರಯತ್ನ ಮಾಡಬೇಕೊ ಅಷ್ಟು ಪ್ರಯತ್ನ ಮಾಡುತ್ತಿಲ್ಲ. ಈಗಲೂ ಕೂಡ ನನ್ನ ಹರಕುಮುರುಕು ಹಿಂದಿ ತಮಿಳುನಾಡಿನ, ಕರ್ನಾಟಕದ ಸೋದರರಿಗೆ ಅರ್ಥವಾಗುತ್ತದೆ ಸ್ವಲ್ಪಮಟ್ಟಿಗೆ ಎಂದು ನನಗೆ ಮನವರಿಕೆಯಾದರೆ ನಾನು ಸಮಾಧಾನಗೊಂಡು ಹೋಗುತ್ತೇನೆ.

ಆದರೆ ಪರಿಸ್ಥಿತಿ ಹಾಗಿಲ್ಲ. ದೇಶಬಂಧು ದಾಸರನ್ನು ನಾನು ಮರೆಯುತ್ತಿದ್ದೇನೆ. ಈ ಪಾಪಕ್ಕೆ ಬಂಗಾಳದ್ದೂ ಕಾಣಿಕೆ ಇದೆ. ರವೀಂದ್ರನಾಥ ಠಾಕೂರರು ಅಂಥ ಅದ್ಭುತ ಸಾಹಿತ್ಯ ಸೃಷ್ಟಿಸಿರುವ ಆ ಭಾಷೆಯನ್ನು ಕಲಿಯಲು ದೇವರು ನನಗೆ ಶಕ್ತಿ ಕೊಟ್ಟಿದ್ದರೆ ಚೆನ್ನಾಗಿತ್ತು. ನನ್ನ ಬಂಗಾಳಿ ಸೋದರರಿಗೆ ಆ ಭಾಷೆಯಲ್ಲಿ ಹೇಳಬಹುದಾಗಿತ್ತು.ಇನ್ನು ಒಂದೇ ಒಂದು ಬಿನ್ನಹ. ಚೆನ್ನಾಗಿ ತಿಳಿದುಕೊಳ್ಳಿ, ನಾನು ಹೇಳಬೇಕಾದ್ದನ್ನೆಲ್ಲ ಹಿಂದಿಯಲ್ಲಿ ಹೇಳಿದ್ದೇನೆ. ನಿಮಗೂ ಅರ್ಥವಾಗಿದೆ. ದಾಸರು ಬಂದು ತಮಗೆ ಬೇಕಾದದ್ದನ್ನು ಹೇಳುತ್ತಾರೆ. ದಾಸರು ಗೊತ್ತುವಳಿಯನ್ನು ಓದುವದಿಲ್ಲ. ಓದಲು ಒತ್ತಾಯ ಮಾಡಬೇಡಿ. ನೀವು ಓದಿರದಿದ್ದರೆ ನಾಳೆ ಪತ್ರಿಕೆಗಳಲ್ಲಿ ಓದಿ. ಅದರಲ್ಲಿ ಇರುವುದು ಇಷ್ಟೇ. ಪರಿವರ್ತನವಾದಿಗಳು, ಅಪರಿವರ್ತನವಾದಿಗಳು ಏಕಮತದಿಂದ ಇರಬೇಕು ಎಂಬುದು ಆಶಯ. ನಮ್ಮ ಅಭಿಪ್ರಾಯಗಳು ಬೇರೆ ಬೇರೆ. ಆದರೆ ನಮ್ಮ ಹೃದಯ ಒಂದೇ. ನೀವು ಅಪರಿವರ್ತನವಾದಿಗಳಾಗಿದ್ರೆ ನಿಮ್ಮ ಹೃದಯದಲ್ಲಿ ನನಗಿರುವಷ್ಟು ಸ್ಥಾನವೇ ದೇಶಬಂಧು

ದಾಸರಿಗೆ, ಪಂಡಿತ್ ಮೋತೀಲಾಲರಿಗೆ, ಕೇಲ್ಕರ್ ಮತ್ತು ಇತರರಿಗೆ ಇರಬೇಕು. ನಿಮ್ಮ ನಾಯಕರುಗಳಿಗೆ ಕೊಡುವಷ್ಟು ಗೌರವವನ್ನು ನನಗೂ ಕೊಡಬೇಕು. ಇದೇ ಹಿಂದೂ ಮುಸ್ಲಿಂ ಐಕ್ಯತೆ. ಹಿಂದೂ ಮುಸ್ಲಿಮ್ ಐಕ್ಯ ಎಂದರೆ ನಾನು ಸನಾತನ



ಇದ್ದರೆ ನನ್ನ ಹೃದಯದಲ್ಲಿ ಮಾಲವೀಯ ಅವರಿಗೆ ಯಾವ ಸ್ಥಾನವಿದೆಯೋ ಮೌಲಾನಾ ಮಹಮದಾಲಿ, ಶೌಕತಾಲಿ ಮತ್ತು ಇತರ ಮುಸಲ್ಮಾನರ ಬಗ್ಗೆಯೂ ಅದೇ ಸ್ಥಾನ ಇರಬೇಕು. ಅವರು ನಮ್ಮನ್ನು ಶತ್ರುಗಳೆಂದು ತಿಳಿದರೂ ಕೂಡ ನಮ್ಮ ಈ ಭಾವ ಕದಲಕೂಡದು; ವಿಚಿತ್ರ ಅಲ್ಲವೇ ಇದು. ಅದು ಇದೇ. ಇನ್ನು ನೀವು ಗೊತ್ತುವಳಿ ಓದಿಕೊಳ್ಳಿ ಮತ್ತು ದಾಸರು ಹೇಳುವದನ್ನು ಕೇಳಿಕೊಳ್ಳಿ ದಾಸರಿಗೆ ಗೊತ್ತುವಳಿ ಓದಲು ಒತ್ತಾಯಪಡಿಸಬೇಡಿರಿ.ಅಧ್ಯಕ್ಷರು ಇಂಗ್ಲಿಷಿನಲ್ಲಿ ಭಾಷಣ ಮುಂದುವರಿಸಿದರು: ಹತ್ತು ನಿಮಿಷಕ್ಕಿಂತ ಹೆಚ್ಚಾಗಿ ಮಾತನಾಡುವುದಿಲ್ಲ. ಅರ್ಧಗಂಟೆ ಎಂದುಕೊಂಡಿದ್ದೆ. ಅದರಲ್ಲೇ ಆಗಲೇ ಭಾಷಣಕ್ಕೆ ತುಂಬಾ ಹೊತ್ತು ತೆಗೆದುಕೊಂಡೆ. ನನ್ನ ಭಾಷಣ ನಿಮಗೆ ಆಗಲೇ ಸಿಕ್ಕಿದೆ. ಅದನ್ನು ಕೂಡಾ ಈಗ ಓದುವದಿಲ್ಲ. ಅದರಿಂದ ನಿಮಗೂ ಕಾಲಹರಣ, ನನಗೂ ಕಾಲಹರಣ. ನಿಮಗೆ ಬೇಸರ, ಆದ್ದರಿಂದ– ಭಾಷಣ ಓದುವದಿಲ್ಲ. ಆದಷ್ಟು ಕೆಲಸಕ್ಕೆ ತೊಡಗಬೇಕು – ದೇಶಬಂಧು ದಾಸರು ಮುಖ್ಯ ಗೊತ್ತುವಳಿಯನ್ನು ಮಂಡಿಸುತ್ತಾರೆ. ನೀವು ಆ ಗೊತ್ತುವಳಿಯನ್ನು ತಿರಸ್ಕರಿಸಿದರೆ, ನಿಮ್ಮ ದಾರಿ ನೀವು ಹಿಡಿದು, ದೇಶಕ್ಕೂ ನಿಮಗೂ ಯಾವುದು ನಿಮಗೆ ಉತ್ತಮ ಎನಿಸುತ್ತದೆಯೋ ಆ ರೀತಿ ಮಾಡಬೇಕು; ನಾನು ಉತ್ತಮ ಎಂದು ತಿಳಿದುಕೊಂಡ ಕೆಲಸವನ್ನು ಎಂದರೆ ನೂಲುವದನ್ನು ಮಾಡಲು ನನಗೆ ಅನುಮತಿ ಕೊಡಬೇಕು. ನಿಮ್ಮ ಮುಂದೆ ಬರುವ ಗೊತ್ತುವಳಿಯನ್ನು ಪ್ರತಿಯೊಬ್ಬರೂ ಚೆನ್ನಾಗಿ ಪರ್ಯಾಲೋಚಿಸಿ ಎಂದು ಕೇಳಿಕೊಳ್ಳುತ್ತೇನೆ.

ರಾಷ್ಟ್ರದ ಮುಂದೆ ಒಂದು ಕ್ರಾಂತಿಕಾರಿ ಪರಿವರ್ತನೆಯ ವಿಚಾರವನ್ನು ಮಂಡಿಸಲಾಗುತ್ತಿದೆ. ಲಾಲಾಜಿ ಹೇಳಿದಂತೆ ಕಲ್ಕತ್ತೆಯ ವಿಶೇಷ ಅಧಿವೇಶನದಲ್ಲಿ – 1920ರಲ್ಲಿ ಅವರ ಅಧ್ಯಕ್ಷತೆಯಲ್ಲಿ ರಾಷ್ಟ್ರ ಕೈಕೊಂಡ ಪರಿವರ್ತನೆಯಷ್ಟೇ ಇದೂ ಕೂಡ ಕ್ರಾಂತಿಕಾರಿ ಎನ್ನುತ್ತೇನೆ. ನಾನು ದೇಶದ ಈ ಬದಲಾವಣೆಯು ಅದಕ್ಕಿಂತಲೂ ಹೆಚ್ಚು ಕ್ರಾಂತಿಕಾರಿ ಎಂದು ಹೇಳಿದ ಅವರ ಮಾತಿಗೆ ದನಿಗೂಡಿಸುತ್ತೇನೆ. ಈ ಗೊತ್ತುವಳಿಯನ್ನು ನೀವು ಪೂರ್ಣ ಮನಸ್ಸಿನಿಂದ ಒಪ್ಪಿಕೊಂಡು ಅದರಂತೆ ನಡೆದರೆ ಸ್ವರಾಜ್ಯದ ಹತ್ತಿರಹತ್ತಿರಕ್ಕೆ ನೀವು ಬರುತ್ತೀರಿ ಎಂದು ಧೈರ್ಯವಾಗಿ ಹೇಳುತ್ತೇನೆ. ಈ ಗೊತ್ತುವಳಿ ಅಸ್ಪಷ್ಟವಾಗಿಲ್ಲ. ಕೆಲಸಮಾಡುವ ಮನಸ್ಸು ಇದ್ದವರಿಗೆ ಎಲ್ಲರಿಗೂ ಇದೊಂದು ಕರೆ. ಅರ್ಥಮಾಡಿಕೊಳ್ಳಬಲ್ಲ ಗಂಡು ಹೆಣ್ಣು, ಯಾರು ಯಾರು ಈ ಸಭೆಯಲ್ಲಿದ್ದರೂ ಅವರಿಗಾಗಿಯೇ ಈ ಠರಾವು ಬಂದಿದೆ. ದೇಶಬಂಧು ದಾಸರಾಗಲೀ, ಮೌಲಾನಾ ಮಹಮ್ಮದಾಲಿ ಆಗಲಿ, ಈ ಠರಾವನ್ನು ಒಪ್ಪಿಕೊಳ್ಳಿ ಎಂದು ನಿಮ್ಮನ್ನು ಕೇಳದಿದ್ದರೂ ದೇವರ ಸಾಕ್ಷಿಯಾಗಿ ಒಪ್ಪಿಕೊಳ್ಳಲು ನಿಮ್ಮನ್ನು ನಾನು ಕೇಳಿಕೊಳ್ಳುತ್ತೇನೆ. ನೀವು ಈ ಠರಾವಿನ ಮೇಲೆ ಮತ ಕೊಡುವಾಗ ದೈವಸಾಕ್ಷಿಯಾಗಿ ಕೊಡುತ್ತಿದ್ದೇನೆ ಎಂದುಕೊಳ್ಳಿ . ರಾಷ್ಟ್ರಕ್ಕಾಗಿ ,ದೇಶದ ಕಡುಬಡವರಿಗಾಗಿ, ಸ್ವರಾಜ್ಯ ಸಂಪಾದನೆಗಾಗಿ ಏನಾದರೂ ಮಾಡುವ ಸಂಕಲ್ಪ ಕೈಕೊಳ್ಳುವಿರಿ ಎಂದು ಅದರ ಅರ್ಥ. ಇದರ ಬಗ್ಗೆ ನಿಮ್ಮ ಮನಸ್ಸಿನಲ್ಲಿ ಸಂದೇಹ ಇದ್ದರೆ ತಿರಸ್ಕರಿಸಿ ಎನ್ನುತ್ತೇನೆ.

ಈ ಠರಾವಿನ ಹಿಂದೆ ನನ್ನ ವ್ಯಕ್ತಿತ್ವ ಇದೆ ಎಂದು ನೀವು ಚಿಂತಿಸಬೇಕಾಗಿಲ್ಲ. ನಾನು ಎಂದೂ ತಪ್ಪು ಮಾಡಲಾರದವನು ಅಲ್ಲ ಎಂದು ಪದೇ ಪದೇ ಹೇಳಿದ್ದೇನೆ. ನಾನೂ ತಪ್ಪು ಮಾಡುವವ ಎಂದು ಮತ್ತೆ ಮತ್ತೆ ಒಪ್ಪಿಕೊಂಡಿದ್ದೇನೆ. ನನ್ನ ಬದುಕಿನಲ್ಲಿ ಕೆಲವು ಸಲ ಹಿಮಾಲಯದಂಥ ತಪ್ಪು ಮಾಡಿದ್ದೇನೆ, ಒಪ್ಪಿಕೊಂಡಿದ್ದೇನೆ. ಅದಕ್ಕಾಗಿ ಪ್ರಾಯಶ್ಚಿತ್ತ ಮಾಡಿಕೊಂಡಿದ್ದೇನೆ. ತಪ್ಪು ಮಾಡದವನು ಪರಿಪೂರ್ಣಪುರುಷ. ಅವನು ತಪಸ್ಸು ಮಾಡಬೇಕಾಗಿಲ್ಲ.

ಅವನಿಗೆ ಪ್ರಾಯಶ್ಚಿತ್ತ ಬೇಕಿಲ್ಲ. ಏಕೆಂದರೆ ಅವನು ತಪ್ಪನ್ನೇ ಮಾಡಲಾರ. ಅಂಥವನು ತಿಳಿಸಿ ಹೇಳಬೇಕಾದ ಅಗತ್ಯವೇನಿಲ್ಲ. ಆದ್ದರಿಂದ ನನ್ನ ವ್ಯಕ್ತಿತ್ವವನ್ನು ಮರೆತು ಈ ಸಮಸ್ಯೆಗೆ ಸರಿಯಾಗಿ ಉತ್ತರ ಹುಡುಕಿರಿ.

ಈ ತೀರ್ಮಾನ ಬಹಳ ಮಹತ್ತರವಾದದ್ದು ಇದಕ್ಕೆ ವಿರುದ್ಧವಾಗಿ

ಸಾಕಷ್ಟು ದೊಡ್ಡ ಗುಂಪು ಇದೆ ಎಂದು ಬಲ್ಲೆ. ಕೇವಲ ನೂಲುವದನ್ನೆ ನಂಬಿ ಕುಳಿತುಕೊಳ್ಳುವದು ಯೋಗ್ಯವಲ್ಲ ಎಂದು ಒಂದು ಗುಂಪು. ನೂಲುವದು ಒಳ್ಳೆಯದೇ. ಆದರೆ ಇದು ಬಹಳ ಕಷ್ಟದಾಯಕ ದೀರ್ಘ ಪ್ರಯಾಸ ಎನ್ನುತ್ತದೆ ಇನ್ನೊಂದು. ಗುಂಪು. ಖಾದಿ, ನೂಲುವದು ಒಳ್ಳೆಯವೆ. ಆದರೆ ರಾಷ್ಟ್ರೀಯ ಮತಾಧಿಕಾರದಲ್ಲಿ ಇವಕ್ಕೆ ಸ್ಥಾನ ಇಲ್ಲ ಎನ್ನುತ್ತದೆ ಮೂರನೆಯ ಗುಂಪು. ಇವಕ್ಕೆ ವಿರುದ್ಧವಾದ ಅಭಿಪ್ರಾಯ ನನ್ನದು. ದಿನೇ ದಿನೇ ಇದು ನನಗೆ ಹೆಚ್ಚು ಮನದಟ್ಟಾಗುತ್ತಿದೆ.

ಸಾಧ್ಯವಾದರೆ ದಿನವೂ ಪ್ರತಿಯೊಂದು ಗಂಟೆಯಲ್ಲಿಯೂ ನಾನು ನೂಲುತ್ತಿದ್ದೆ. ರಾಟೆಯ ಒಂದೊಂದು ಸುತ್ತಿನಿಂದಲೂ ಸ್ವರಾಜ್ಯ ನಮಗೆ ಹತ್ತಿರ ಹತ್ತಿರ ಬರುತ್ತಿದೆ ಎಂದು ನನಗೆ ಅನಿಸುತ್ತದೆ. ಈ ಸುತ್ತುಗಳನ್ನು ಮೂವತ್ತು ಕೋಟಿಯಿಂದ ಗುಣಿಸಿ, ಅದರಿಂದ ಸ್ವರಾಜ್ಯ ಪ್ರಾಪ್ತಿಗೆ ಎಷ್ಟು ವೇಗ ಬರುತ್ತದೆಯೋ ನೋಡಿ. ಈ ಗತಿ, ಈ ವೇಗ ಬರಬೇಕಾದರೆ ನೂಲುವ ಕ್ರಿಯೆಯಲ್ಲಿ ಸ್ವರಾಜ್ಯ ಸಂಪಾದನೆಯ ಶಕ್ತಿ ಅಡಗಿದೆ ಎಂಬ ನನ್ನಲ್ಲಿರುವ ದೃಢವಿಶ್ವಾಸದ ಕಾವು ನಿಮ್ಮಲ್ಲೂ ಉಂಟಾಗಬೇಕು. ನನ್ನ ಭಾಷಣದಲ್ಲಿ ಎಷ್ಟೋ ಮಾತು ಹೇಳಿದ್ದೇನೆ. ಶ್ರೀಮತಿ ಸರೋಜಿನಿದೇವಿ ನಾಯಿಡು ಒಂದು ಮಾತನ್ನು ಮಾತ್ರ ಹೇಳಲು ನನಗೆ ಹೇಳಿದ್ದಾಳೆ.

"ದಕ್ಷಿಣ ಆಫ್ರಿಕದಲ್ಲಿ ಅಂಥ ಅದ್ಭುತಸೇವೆ ಮಾಡಿಬಂದ ಆಕೆಯ ಗೌರವಕ್ಕಾಗಿ ನಾನು ಅದನ್ನು ಹೇಳುತ್ತೇನೆ. – ಹಿಂದೂ ಮುಸ್ಲಿಂ ಐಕ್ಯದ ವಿಷಯ. ನನಗೆ ಇದರ ಉಲ್ಲಂಘನೆ ತುಂಬಾ ಬೇಸರದ ವಿಷಯ . ನಾನು ತುಂಬಾ ದಣಿದಿದ್ದೇನೆ. ಹಿಂದೂ ಮುಸ್ಲಿಂ ದಂಗೆ ಎಲ್ಲಿಯಾದರೂ ಆಗಲಿ. ಆದರ ಪಾಡಿಗೆ ಅದನ್ನು ಬಿಡೋಣ – ಎನ್ನುತ್ತಾರೆ ಶೌಕತ್ ಆಲಿ. ಆ ದೊಡ್ಡ ತಲೆಯಲ್ಲಿ ಬೇಕಾದಷ್ಟು ವಿವೇಕ ಇದೆ; ಅದರಲ್ಲಿ ಬರೀ ಚರಬಿ ತುಂಬಿಲ್ಲ (ನಗೆ). ಪದೇ ಪದೇ ಅವರು ಹೇಳಿದ್ದಾರೆ – ನನ್ನ ಈ ಮುಸಲ್ಮಾನರಲ್ಲಿ ಅವರ ತಲೆ ಕೆಟ್ಟಿದೆ, ಇದೇ ರೀತಿ ನಿಮ್ಮ ಹಿಂದೂಗಳೂ ಮೂರ್ಖರಾಗಿದ್ದಾರೆ .ಜಗಳಗಳನ್ನು ತೀರ್ಮಾನಿಸುವ ಪ್ರಯತ್ನದಲ್ಲಿ ಸ್ವರಾಜ್ಯ ನಮ್ಮ ಕೈಯಿಂದ ಜಾರಿ ಹೋಗಬಾರದು . ಅವರ ಪಾಡಿಗೆ ಅವರನ್ನು ಬಿಟ್ಟುಬಿಡೋಣ.

ರಾಟೆಯಂತೆ ಹಿಂದೂ ಮುಸ್ಲಿಂ ಐಕ್ಯವು ನನಗೆ ಒಂದು ಹುಚ್ಚು. ಅದರಲ್ಲಿ ನನಗೆ ಆಸಕ್ತಿ , ರಾಗ, ಭಕ್ತಿ. ನಾನು ಅದನ್ನು ಕೈಬಿಟ್ಟು ಮರೆತು ಕೂಡಲಾರೆ. ನಾನು ಈ ಹುಡುಗಿ, ಗುಲ್ನಾರಿನಲ್ಲಿ ತುಂಬ ಮಮತೆ ಇಟ್ಟುಕೊಂಡಿದ್ದೇನೆ. ಏಕೆ ಹೀಗೆ ಎಂದು ನೀವು ಕೇಳಿರಿ . ಒಂದು ಕಾರಣ ಇದೆ:

ಈ ಹುಡುಗಿ ದೊಡ್ಡವಳಾದಾಗ ಒಬ್ಬ ಸನಾತನೀ ಗಾಂಧೀಯನ್ನು ನೆನೆದುಕೊಳ್ಳುತ್ತಾಳೆ. ಆ ಗಾಂಧೀ ಅವಳ ಜೊತೆಗೆ ಮಾಂಸ ತಿನ್ನುತ್ತಿರಲಿಲ್ಲ. ಮಾಂಸ ಮುಟ್ಟುತ್ತಿರಲಿಲ್ಲ. ಯಾರು ಬೇಕಾದರೂ ತಿನ್ನಲಿ ಎಂದು ಕೈ ಬಿಡುತ್ತಿದ್ದ, ತನ್ನ ಪಾಡಿಗೆ ತಾನು ಗೋಪೂಜೆ ಮಾಡುತ್ತಿದ್ದ. ಈ ಹುಡುಗಿ ಪ್ರೌಢ ವಯಸ್ಕಳಾಗುವ ವೇಳೆಗೆ ನಾನು ಸಾಯಬಹುದು. ಅವಳ ಪ್ರೌಢಳಾದಾಗ ನನ್ನ ಸಂದೇಶವನ್ನು ಪ್ರತಿಬಿಂಬಿಸುತ್ತಾಳೆ. ಇವತ್ತು ಅವಳು ಶುದ್ಧಳು. ಏನೂ ಅರಿಯದವಳು. ಎಲ್ಲವು ಸರಿ ಎಂದುಕೊಳ್ಳುತ್ತಾಳೆ. ದ್ವೇಷ ಎಂಬುದು ಅವಳಿಗಿಲ್ಲ. ಬರಿ ಪ್ರೇಮ. ಪ್ರೇಮದ ಪುತ್ಥಳಿ ಅವಳು. ನನಗೂ ಅವಳಿಗೂ ಸಮುದ್ರದಷ್ಟು ಅಂತರವಿದ್ದರೂ, ನನ್ನ ಸ್ವಂತ ಮಾಂಸ ರಕ್ತ ಎನ್ನುವಂತೆ ನಡೆಸಿಕೊಳ್ಳುತ್ತಿದ್ದೇನೆ, ಈ ರೀತಿ ಮುಸಲ್ಮಾನರ ಸಂಗಡ ಏಕತೆಯನ್ನು ಸಾಧಿಸುತ್ತಿದ್ದೇನೆ. ಕೊರಾನ್ ಪ್ರಕಾರ ಗೋವನ್ನು ಕೊಲ್ಲುವದು ನ್ಯಾಯ ಎಂದು ಅವಳು ತಿಳಿಯುತ್ತಾಳೆ, ನನ್ನ ಧರ್ಮ ಗೋವಧೆ ಮಾಡಕೂಡದು ಎಂದು ಹೇಳುತ್ತದೆ. ಹೀಗಿರುವಾಗ ಗೋವಧೆ ಮಾಡಬೇಡ ಎಂದು ಅವಳನ್ನು ಅಡ್ಡಿಪಡಿಸಲು ನಾನು ಯಾರು? ಹಾಗೆ ಅಡ್ಡಿ ಪಡಿಸದಿದ್ದರೆ ನನ್ನ ಧರ್ಮಕ್ಕೆ ನಾನು ತಪ್ಪಿ ನಡೆದಂತೆ. ಆದರೆ ಪ್ರೇಮದಿಂದ ಅವಳ ಮನ ಒಪ್ಪಿಸಿ ಗೆಲ್ಲುತ್ತೇನೆ; ಕೋರಾನ್ ನೀನು ಗೋವನ್ನು ಕೊಂದೇ ತೀರಬೇಕು, ಗೋಮಾಂಸತಿಂದೇ ತೀರಬೇಕು ಎಂದು ಹೇಳುವದಿಲ್ಲ. ನನ್ನ ಧರ್ಮ ನನಗೆ ಇದಕ್ಕೆ ಸಮ್ಮತಿ ಕೊಡುವದಿಲ್ಲ. ಅಷ್ಟೇ ಅಲ್ಲ, ನನ್ನ ಕೋರಾನ್ ಗೋವನ್ನು ಪೂಜಿಸುವಂತೆ ನನ್ನನ್ನು ಬಲಾತ್ಕರಿಸುತ್ತದೆ .

ನೀನು ಗೋಪೂಜೆಯನ್ನು ಬಿಡಬಹುದು. ಆದರೆ ನಾನು ಗೋಮಾಂಸ ತಿನ್ನದಿದ್ದರೆ, ಗೋಪೂಜೆ ಮಾಡಿದರೆ ನೀನು ಸೈರಿಸಲೇಬೇಕು. ನನ್ನ ಸ್ನೇಹಕ್ಕಾಗಿ ನೀನು ಗೋವಧೆ ಮಾಡದೆ ಬಿಡಬಹುದು. ಇದು ನನ್ನ ಪ್ರೇಮದ ರಹಸ್ಯ . ಈ ಚಿಕ್ಕ ಹುಡುಗಿ, ಗುಲ್ನಾರ ಬಗ್ಗೆ ನನಗಿರುವ ಮಮತೆಯ ಗುಟ್ಟು ಇದೇ. ಆದ್ದರಿ0ದ ಶೌಕತ್ ಆಲಿಯು ಜೇಬಿನಲ್ಲಿ ನನ್ನನ್ನು ಹೊತ್ತುಕೊಂಡು ಹೋಗಲಿ, ನನಗೆ ಒಪ್ಪಿಗೆ.

ಮಾಲವೀಯರ ಬಗ್ಗೆ ನಾನೇಕೆ ವಿಚಾರ ಮಾಡುವದಿಲ್ಲ? ಮಾಲವೀಯರ ಬಗ್ಗೆ ನನ್ನ ಪೂಜ್ಯಭಾವ ನನಗೆ ಸಹಜ, ಸ್ವಾಭಾವಿಕ. ಆದರೆ ನಾನು ಮುಸಲ್ಮಾನರ ಪಕ್ಷಪಾತಿನೆ ಇದ್ದರೆ ಹೇಗೆ? ಮುಸಲ್ಮಾನರ ಪಕ್ಷಪಾತಿಯಾದರೇನೇ ಈ ಸಮಸ್ಯೆಗೆ ಸರಿಯಾದ ಉತ್ತರ, ಇದಕ್ಕೆ ಸರಿಯಾದ ಪರಿಹಾರ ನಿಮಗೆ ಸಿಗಬೇಕಾದರೆ ಹಿ0ದೂಗಳೂ ಮುಸಲ್ಮಾನರೂ ಈ ಸಮಸ್ಯೆಗೆ ಏನು ಮಾಡಬೇಕು ಎಂದು ಕೇಳಿದರೆ ಪ್ರತಿಯೊಬ್ಬ ಹಿಂದೂ ; ಮುಸಲ್ಮಾನ ಪಕ್ಷಪಾತಿಯಾಗಬೇಕು. ಪ್ರತಿಯೊಬ್ಬ ಮುಸಲ್ಮಾನನೂ ಹಿ0ದೂ ಪಕ್ಷಪಾತಿ ಆಗಬೇಕು ಎನ್ನುತ್ತೇನೆ . ದೇವರನ್ನು ನೋಡಬೇಕು ಇಂತು ಸಂಧಿಸಬೇಕು ಎನ್ನುವ ದ್ರಷ್ಟಾರ ಒಂದು ರೀತಿ ನೋಡುತ್ತಾನೆ, ನಾನು ಇನ್ನೊಂದು ರೀತಿ ನೋಡುತ್ತೇನೆ. ಅವನು ಮಾಡುವದೆಲ್ಲವು ನನ್ನ ದೃಷ್ಟಿಗೆ ವಕ್ರವಾಗಿ ಕಾಣುತ್ತದೆ. ಆಗ ನಾನು ಪಕ್ಷಪಾತಿ ಆಗಬೇಕು, ಆಗ ನಾನು ನ್ಯಾಯವಾಗಿ ಇರಬಲ್ಲೆ ಎಂದುಕೊಳ್ಳುತ್ತೇನೆ. ಮುಸಲಾನರು ಹಿಂದೂ ಪಕ್ಷಪಾತಿಗಳಾಗಬೇಕು ಎಂದು ಪ್ರಾರ್ಥಿಸಬಯಸುತ್ತೇನೆ.

ಕಡೆಗೆ ಇನ್ನೊಂದು ಮಾತು ಹೇಳಲು ಶ್ರೀಮತಿ ನಾಯಡು ನನಗೆ ಹೇಳಿದ್ದಾಳೆ. ಅದು ಉದಾರವಾದಿಗಳ ಬಗ್ಗೆ. ಅವರು ಕೇಳುತ್ತಾರೆ. ಮಂದಗಾಮಿಗಳ ಬಗ್ಗೆ ಉದಾರವಾದಿಗಳ ಬಗ್ಗೆ (ಲಿಬರಲ್ ) ಏನಾದರೂ ಹೇಳುತ್ತೀರಾ ಎಂದು. ಉದಾರವಾದಿಗಳು ನನಗೆ ಪೂಜನೀಯರು ಎಂದು ಹೇಳುತ್ತೇನೆ. ಸ್ವರಾಜ್ಯವಾದಿಗಳು ಕಾಂಗ್ರೆಸ್ಸಿಗೆ ಬರಬೇಕು ಎನ್ನುವಂತೆಯೇ ಉದಾರ ವಾದಿಗಳೂ ಬರಬೇಕು ಎನ್ನುತ್ತೇನೆ. ಅವರ ಮುಂದೆ ನನ್ನ ಹೃದಯವನ್ನು ತೆರೆದಿಟ್ಟಿದ್ದೇನೆ ರಾಟೆಯ ಮುಂದೆ ಕುಳಿತು ನೂಲೋಣ ಎನ್ನುತ್ತೇನೆ. ಇಲ್ಲ, ರಾಟೆಯ ಮುಂದೆ ಕುಳಿತು

ನಾವು ನೂಲುವದಿಲ್ಲ ಎನ್ನುತ್ತಾರೆ ಅವರು. ಅವರು ಹಾಗೆಂದರೆ ನಾನೇನು ಹೇಳಲಿ? ಕಾಂಗ್ರೆಸ್ಸಿನೊಳಗೆ ಬನ್ನಿರಿ. ನನ್ನನ್ನು ಹೊರಗೆ ನೂಕಿಬಿಡಿರಿ ಎಂದು ಅವರಿಗೆ ಹೇಳುತ್ತೇನೆ. ನಾನು ಮುಗಿಸಿದೆ. ದೇವರ ಸಾಕ್ಷಿಯಾಗಿ ಹೇಳಿ, – ನೀವು ಏನು ತೀರ್ಮಾನಿಸುತ್ತೀರೋ ಪ್ರಾಣಹೋದರೂ ಚಿಂತೆಯಿಲ್ಲ, ಅದನ್ನು ಮಾಡುತ್ತೇವೆ .

( ಮುಂದುವರಿಯುವುದು ) ■

# ಮಾನೋರ್ಮಿ ದೊಡ್ಡಿಯ
# ಮಾದರಿ ಶಿಬಿರ ..



ಶಿಬಿರದ ಉದ್ಘಾಟನಾ ಸಮಾರಂಭ ..

**ಯಾ**ವುದೇ ದೇಶದ ದೊಡ್ಡ ಆಸ್ತಿ ಯುವ ಜನಾಂಗ .ನಮ್ಮ ಪ್ರಜಾಪ್ರಭುತ್ವದ ಎಲ್ಲಾ ಸ್ತರಗಳಲ್ಲಿಯೂ ನಾಡಿನ ಜವಾಬ್ದಾರಿ ಹಾಗೂ ಸಾಮಾಜಿಕ ಹೊಣೆಗಾರಿಕೆಯನ್ನು ಅರಿತು ಹೊತ್ತು ನಡೆಸಿಕೊಡಬೇಕಾದ ಯುವಶಕ್ತಿ ಸುಶಿಕ್ಷಿತರೂ ಸುಸಂಸ್ಕೃತರೂ ಪ್ರಜ್ಞಾವಂತರೂ ಆದರೆ ದೇಶದ ಹಿತವೂ ಎಲ್ಲಾ ವಿಧದಲ್ಲಿಯೂ ಸುರಕ್ಷಿತವಾಗಿರುತ್ತದೆ. ಯುವಶಕ್ತಿ ಸದ್ಗುಣ , ಸದಭಿರುಚಿ ಹೊಂದಿದ್ದರೆ ಮಾತ್ರ ಆರೋಗ್ಯಕರ ಸಮಾಜ ನಿರ್ಮಿಸಲು ಸಾಧ್ಯ. ಈ ದಿಶೆಯಲ್ಲಿ ಸ್ವಾಮಿ ವಿವೇಕಾನಂದರು ,ಮಹಾತ್ಮ ಗಾಂಧೀಜಿ ಅವರು ನೂರಾರು ದಿವ್ಯ ಸಂದೇಶಗಳನ್ನು ನೀಡಿದ್ದಾರ .

ಲೋಕದಲ್ಲಿ ಪ್ರತಿಯೊಬ್ಬ ವ್ಯಕ್ತಿಗೂ ತನ್ನತನ ಉಂಟು, ವ್ಯಕ್ತಿನಿಷ್ಠವಾದ ವಿಶಿಷ್ಟ ಗುಣ , ಶಕ್ತಿಯುಂಟು . ಒಂದು ರೀತಿಯಲ್ಲಿ ಅದು ಅವನ ಅನಂತ ಶಕ್ತಿ. ಮನುಷ್ಯ ಅದ್ಭುತವಾದ ಈ ಶಕ್ತಿಯ ಬಗ್ಗೆ ತಿಳಿಯದೆ ಇರುವ ಸಂದರ್ಭಗಳೇ ಹೆಚ್ಚು. ಬಹಿರಂಗದ ಬೆಳವಣಿಗೆಗೆ ಒತ್ತು ಕೊಡುವಷ್ಟು ಅಂತರಂಗದ ವಿಕಾಸಕ್ಕೆ ನೀಡುತ್ತಿಲ್ಲ. ತನ್ನ ಅಂತ:ಸತ್ವದ ಬಗ್ಗೆ, ವೈಯಕ್ತಿಕ ಸಾಮರ್ಥ್ಯದ ಬಗ್ಗೆ ಸರಿಯಾಗಿ ತಿಳಿಯದವರು ಲೋಕಜ್ಞಾನವನ್ನು ಹೇಗೆ ಅರ್ಥ ಮಾಡಿಕೊಂಡಾರು. ಆದ್ದರಿಂದ ತನ್ನಲ್ಲಿರುವ ವಿಶೇಷ ಶಕ್ತಿಯನ್ನು ತಿಳಿದುಕೊಳ್ಳುವುದು ಮೊದಲ ಹಂತ; ಆ ಶಕ್ತಿಯನ್ನು ತನ್ನ ಮತ್ತು ಸಮಾಜದ ಒಳಿತಿಗಾಗಿ ಬಳಸುವುದು ಎರಡನೇ ಹಂತ ; ಹಾಗೆ ಮಾಡುತ್ತ ಅಂತ:ಶಕ್ತಿಯನ್ನು ಅರಳಿಸಿಕೊಳ್ಳುವುದು ಮೂರನೇ ಹಂತ. ಈ ವಿಕಸನ ಕ್ರಿಯೆಯನ್ನ ' ವ್ಯಕ್ತಿತ್ವ ವಿಕಸನ ' ಎಂದು ಕರೆಯಲಾಗುತ್ತದೆ. ಇಂತಹ ವ್ಯಕ್ತಿತ್ವವನ್ನು ರೂಪಿಸಬಲ್ಲ ಹಾಗೂ ಮಹಾತ್ಮ ಗಾಂಧೀಜಿಯವರ ಆಶಯಗಳನ್ನ ಅನುಷ್ಠಾನಗೊಳಿಸಲು ಸಾಧ್ಯವಾಗುವಂತಹ ಒಂದು ಮಹತ್ವದ ಯೋಜನೆಯಾಗಿ ನಮ್ಮ ಹಿರಿಯರು ರಾಷ್ಟ್ರೀಯ ಸೇವಾ ಯೋಜನೆಯನ್ನು ರೂಪಿಸಿದ್ದಾರೆ .

ಶಿಕ್ಷಣದ ಒಂದು ಭಾಗವಾಗಿ ರೂಪಿತಗೊಂಡಿರುವ ರಾಷ್ಟ್ರೀಯ ಸೇವಾ ಯೋಜನೆ ಯಲ್ಲಿರುವ ಪ್ರೀತಿ,ನಂಬಿಕೆ, ಭರವಸೆ ಅನಂತವಾದುದು. ಪ್ರತಿಯೊಂದು ಕುಟುಂಬ ಜೀವನದುದ್ದಕ್ಕೂ ಮಕ್ಕಳಿಗೆ ಬದುಕು ಕಟ್ಟುವ ಹಾಗೆ ಎನ್.ಎಸ್ ಎಸ್ ಕೂಡುಕುಟುಂಬದಂತೆ. ವಿದ್ಯಾರ್ಥಿಗಳ ಭವಿಷ್ಯವನ್ನು ಸರಿಯಾದ ಕ್ರಮದಲ್ಲಿ ಕಟ್ಟಲು ಬೇಕಾದ ಜೀವನ ಮೌಲ್ಯಗಳನ್ನು ಪ್ರಾಯೋಗಿಕವಾಗಿ ಅಳವಡಿಸಿ ಆ ನಿಟ್ಟಿನಲ್ಲಿ ಯುವ ಸಮೂಹವನ್ನು ಒಂದು ಸರಿಯಾದ ದಾರಿಯಲ್ಲಿ ಕ್ರಮಿಸುವಂತೆ ಪ್ರೇರಣೆಯಾಗಬಲ್ಲ ಯೋಜನೆ. ಒಂದು ದೇಶದ ಸಂಪತ್ತು ಅಳೆಯುವುದು ಚಿನ್ನ ಬೆಳ್ಳಿಯಿಂದಲ್ಲ; ಚಿನ್ನದಂತಹ ವ್ಯಕ್ತಿಗಳಿಂದ. ಅಂತಹ ಚಿನ್ನದಂತಹ ವ್ಯಕ್ತಿಗಳನ್ನು ತಯಾರು ಮಾಡುವ ಶಕ್ತಿ ಎನ್‌ಎಸ್‌ಎಸ್‌ಗೆ ಇದೆ ಎಂಬುದನ್ನು ಹಿರಿಯರು ಈಗಾಗಲೇ ಅನೇಕ ಪ್ರಯೋಗಗಳ ಮೂಲಕ, ಕಾರ್ಯಯೋಜನೆಗಳ ಮೂಲಕ ಕಂಡುಕೊಂಡಿದ್ದಾರೆ.

ಈ ದಿಶೆಯಲ್ಲಿ ಒಂದು ರಾಷ್ಟ್ರದ ಉತ್ಸಾಹ ,ಶಕ್ತಿ ,ಭರವಸೆಗಳ ಪ್ರತೀಕವೇ ಯುವಜನತೆ; ಅವರ ಉತ್ತಮ ಬೆಳವಣಿಗೆಯೇ ರಾಷ್ಟ್ರದ ನಿಜವಾದ ಬೆಳವಣಿಗೆ; ಅಂತಹ ಯುವಜನರ ವ್ಯಕ್ತಿತ್ವ ವಿಕಸನವೇ ರಾಷ್ಟ್ರೀಯ ಸೇವಾ ಯೋಜನೆಯ ಗುರಿ. '"ಯುವಜನರನ್ನು ರಾಷ್ಟ್ರ ನಿರ್ಮಾಣದಲ್ಲಿ ತೊಡಗಿಸಲು ಅವರಲ್ಲಿ ಜ್ಞಾನ ,ಶಕ್ತಿ, ಉತ್ತಮ ಸಂಸ್ಕಾರ ಮತ್ತು ಮಾನವೀಯ ಮೌಲ್ಯಗಳನ್ನು ಬಿತ್ತಬೇಕು"" ಎಂಬುದು ಗಾಂಧೀಜಿಯವರು ಕೊಟ್ಟಿರುವ ಸಂದೇಶ . ಹಾಗೆಯೇ "ನಮ್ಮ ರಾಷ್ಟ್ರ ಮುಂದುವರಿಯಬೇಕಾದರೆ ನಮ್ಮ ಯುವ ಜನಾಂಗ ಅದರಲ್ಲೂ ವಿದ್ಯಾರ್ಥಿಗಳು ಸಾಮಾಜಿಕ ಜವಾಬ್ದಾರಿಯನ್ನರಿತು ಬದುಕಿನೊಡನೆ ನೇರ ಸಂಪರ್ಕ ಇಟ್ಟುಕೊಳ್ಳಬೇಕೆಂಬುದು" ಗಾಂಧಿಯವರ ಕನಸಾಗಿತ್ತು. ಅವರ ಪ್ರಕಾರ '"ಶಾಲಾ-ಕಾಲೇಜಿಗೆ ಹೋಗಿ ಉದ್ಯೋಗದ ಆಸೆಯಿಂದ ಕಲಿಯುವ ವಿದ್ಯಾಭ್ಯಾಸ ವ್ಯಕ್ತಿತ್ವವನ್ನು ರೂಪಿಸುವುದಿಲ್ಲ. ಅದು ಹಣ, ಅಧಿಕಾರಗಳನ್ನು ಗಳಿಸಿಕೊಡಬಹುದು ಅಷ್ಟೇ. ಆದರೆ ನನ್ನ ವಿಶ್ವವಿದ್ಯಾಲಯದ ಕಲ್ಪನೆಯೇ ಬೇರೆ .ಅಲ್ಲಿ ಅನುಭವ ಮತ್ತು ಪರಿಶ್ರಮದಿಂದ ಬಾಳು ರೂಪಿತವಾಗಬೇಕು ;ಶಾಂತಿ ಅಹಿಂಸೆ ಮತ್ತು ಪರಸ್ಪರ ಪ್ರೀತಿಯಿಂದ ಬದುಕುವುದನ್ನು ಕಲಿಯಬೇಕು. ಆಗಲೇ ರಾಷ್ಟ್ರದ ಅಭ್ಯುದಯ ಸಾಧ್ಯ" ಎನ್ನುವ ಗಾಂಧಿಯವರ ಕನಸನ್ನು ಸಾಕಾರಗೊಳಿಸುವ ಕ್ರಿಯಾಯೋಜನೆ ಎನ್ಎಸ್ಎಸ್ ನ ಚಟುವಟಿಕೆ ಮತ್ತು ಅದರ ಭಾಗವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಹಮ್ಮಿಕೊಳ್ಳುವ ಶಿಬಿರಗಳಿಗಿರುತ್ತದೆ ."ಶಿಕ್ಷಣವೆಂದರೆ ಕೇವಲ ಅಕ್ಷರ ಜ್ಞಾನವಲ್ಲ; ವಸ್ತು ಜ್ಞಾನವಲ್ಲ; ಅದು ಶೀಲಸಂವರ್ಧನೆ, ಕರ್ತವ್ಯ ಪ್ರಜ್ಞೆ ಅರಿವು" ಎಂಬುದು ಗಾಂಧಿಯವರ ನಿಲುವು. ಒಂದು ಶಿಬಿರವು ; ಶಿಬಿರಾರ್ಥಿಗಳಲ್ಲಿ ಸೇವಾ ಮನೋಭಾವ ,ಶಿಸ್ತು, ಸಂಯಮ, ಉತ್ತಮ ನಾಯಕತ್ವ, ವ್ಯಕ್ತಿಗೌರವ, ಕಾಯಕ ಗೌರವ, ಸಹಬಾಳ್ವೆ, ಭ್ರಾತೃತ್ವ, ಜಾತ್ಯತೀತತೆ, ಭಾವೈಕ್ಯತೆ ಹಾಗೂ ಜವಾಬ್ದಾರಿಯುತ ವ್ಯಕ್ತಿತ್ವ ಇತ್ಯಾದಿ ಉತ್ತಮ ಧ್ಯೇಯ ಹಾಗೂ ಗುಣಗಳನ್ನು ಬೆಳೆಸಲು ಸಹಕಾರಿಯಾಗುತ್ತದೆ. ಅಲ್ಲದೆ ಇಲ್ಲಿ ಅನುಭವದ ಮೂಲಕ ಶಿಕ್ಷಣವನ್ನು ನೀಡಲಾಗುತ್ತದೆ. ವಿದ್ಯಾರ್ಥಿಯ ಸುಪ್ತ ಸಾಮರ್ಥ್ಯಗಳನ್ನು ಬೆಳೆಸಿಕೊಳ್ಳುವುದರ ಜೊತೆಗೆ ಇರಬಹುದಾದ ಓರೆ ಕೋರೆಗಳನ್ನು ತಿದ್ದಿಕೊಳ್ಳಲು ಇದು ಸಾಧನವಾಗುವುದು.

ಈ ದಿಶೆಯಲ್ಲಿ ರಾಷ್ಟ್ರೀಯ ಸೇವಾ ಯೋಜನೆ ಕರ್ನಾಟಕ ಸರ್ಕಾರ, ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ ಬೆಂಗಳೂರು, ಕರ್ನಾಟಕ ಗಾಂಧಿಸ್ಮಾರಕ ನಿಧಿ ಬೆಂಗಳೂರು ,ಕಸ್ತೂರಬಾ ಗಾಂಧಿ ರಾಷ್ಟ್ರೀಯ ಸ್ಮಾರಕ ಟ್ರಸ್ಟ್ ಅರಸೀಕೆರೆ, ಹೆಚ್. ಸಿ ದಾಸಪ್ಪ ಸಾರ್ವಜನಿಕ ವಿಚಾರ ಸಂಸ್ಥೆ ಮೈಸೂರು, ಬೆಸಗರಹಳ್ಳಿ ಗ್ರಾಮ ಪಂಚಾಯಿತಿ ಮಹರ್ನವಮಿ ದೊಡ್ಡಿ ಗ್ರಾಮಸ್ಥರು, ಮಹಿಳಾ ಸರ್ಕಾರಿ ಕಾಲೇಜು ರಾಷ್ಟ್ರೀಯ ಸೇವಾ ಯೋಜನೆ ಮದ್ದೂರು ಹಾಗೂ ಜಿಲ್ಲೆಯ ಆಯ್ದ ಕಾಲೇಜುಗಳ ರಾಷ್ಟ್ರೀಯ ಸೇವಾ ಯೋಜನೆ ಘಟಕಗಳ ಸಂಯುಕ್ತ



**ಊರಿನ ಕಲ್ಯಾಣಿ ದುರಸ್ತಿಗೆ ಮುಂಚೆ ಮತ್ತು ನಂತರ ..**



ಆಶ್ರಯದಲ್ಲಿ ದೆಹಲಿ ಕೇಂದ್ರ ಗಾಂಧಿ ಸ್ಮಾರಕ ನಿಧಿ 75 ವರ್ಷಾಚರಣೆಯ ಸವಿನೆನಪಿಗಾಗಿ ಶ್ರೀಮತಿ ಯಶೋದರಮ್ಮ ದಾಸಪ್ಪ ಸಂಸ್ಮರಣೆ ಹಾಗೂ 'ವ್ಯಸನ ಮುಕ್ತ ಸಮಾಜಕ್ಕಾಗಿ ಯುವ ಜನತೆ" ಎಂಬ ಧ್ಯೇಯದೊಂದಿಗೆ ಗಾಂಧಿ ತತ್ವ ಪ್ರೇರಿತ ಯುವಜನ ಪ್ರೇರಣಾ ಶಿಬಿರವನ್ನು ಮದ್ದೂರು ತಾಲೂಕು ಬೆಸಗರಹಳ್ಳಿ ಗ್ರಾಮ ಪಂಚಾಯಿತಿ ಮಹರ್ನವಮಿ ದೊಡ್ಡಿಯಲ್ಲಿ ದಿನಾಂಕ 12.03.2024 ರಿಂದ 18. 3.24ರ ವರೆಗೆ 7 ದಿನದ ವಿಶೇಷ ಶಿಬಿರ ಆಯೋಜಿಸಲಾಗಿತ್ತು.



ಕಸ್ತೂರಬಾ ಹಾಗೂ ಮಹಾತ್ಮ ಗಾಂಧೀಜಿಯವರ ಅನುಯಾಯಿಗಳಾಗಿ ನಿಸ್ವಾರ್ಥ ಬದುಕಿನ ಮೂಲಕ ಗಾಂಧಿ ಮಾರ್ಗದಲ್ಲಿ ಆದರ್ಶವಾಗಿ ಬಾಳಿದ "ಕರ್ನಾಟಕದ ಕಸ್ತೂರ ಬಾ" ಎಂದೇ ಪ್ರಖ್ಯಾತರಾದ ಪದ್ಮಭೂಷಣ ಶ್ರೀಮತಿ ಯಶೋದರಮ್ಮ ದಾಸಪ್ಪ ಅವರು ಮಹಿಳೆ ಬದುಕಿಗೆ ಮಾರಕವಾಗಿದ್ದ ಮಧ್ಯಪಾನ ವಿರುದ್ಧ ಹೋರಾಡಿ 1966 ರಲ್ಲಿ ತಮ್ಮ ಸಚಿವ ಪದವಿಗೆ ರಾಜೀನಾಮೆ ನೀಡಿ ರಾಷ್ಟದಲ್ಲಿಯೇ ಮಾದರಿಯಾಗಿ ಬದುಕಿದ ಮಹಾಚೇತನ .ದೀನದಲಿತರ, ನಿರ್ಗತಿಕ ಮಹಿಳೆ ,ಮಕ್ಕಳ, ಸಮಾಜ ಕಡೆಗಣಿಸಿದ ಎಲ್ಲರ ಸೇವೆಯನ್ನು ಮಾಡಿ ಈ ನಾಡಿನಲ್ಲಿ ಗಾಂಧಿ ತತ್ವಗಳನ್ನು ಜೀವಂತವಾಗಿಟ್ಟು ಕಾಪಿಟ್ಟುಕೊಂಡು ಬಂದು ಅವರಂತೆ ಬದುಕಿದ ಆದರ್ಶ ಮಹಿಳೆ ಶ್ರೀಮತಿ ಯಶೋದರಮ್ಮ ದಾಸಪ್ಪ. ಗಾಂಧಿ ಅನುಯಾಯಿಗಳಾಗಿ ಅವರು ಕೈಗೊಂಡಿರುವ ಜನಹಿತ ಕಾರ್ಯಯೋಜನೆಗಳನ್ನು ಇಂದಿನ ಯುವ ಸಮೂಹಕ್ಕೆ ಹಾಗೂ ಜನಸಮುದಾಯಕ್ಕೆ ತಲುಪಿಸುವ ಮಹತ್ತರ ಉದ್ದೇಶ ಈ ಶಿಬಿರದ್ದಾಗಿತ್ತು. ಜನಸಾಮಾನ್ಯರಿಗೆ ವಿಶೇಷವಾಗಿ ಯುವಜನರಿಗೆ ಅವರ ವ್ಯಕ್ತಿತ್ವ, ವಿಚಾರಗಳನ್ನ ಬಿತ್ತುವ ಉದ್ದೇಶದಿಂದ ಅವರ ಸಂಸ್ಮರಣ ಕಾರ್ಯಕ್ರಮ ಈ ಶಿಬಿರದ ಮುಖ್ಯ ಧ್ಯೇಯ. ಯಶೋಧರಮ್ಮ ದಾಸಪ್ಪ ಅವರು ಕರ್ನಾಟಕದ ನಾನಾ ಭಾಗಗಳಲ್ಲಿ ಮಹಿಳೆಯರ ಶ್ರೇಯೋಭಿವೃದ್ಧಿಗಾಗಿ,ಆರ್ಥಿಕ ಸಬಲತೆ ,ಸ್ವಾವಲಂಬನೆ ಬದುಕಿಗಾಗಿ ಹಾಗೂ ಕಸ್ತೂರಬಾ ಗಾಂಧಿ ಅವರ ತತ್ವಗಳನ್ನು ಕಾರ್ಯರೂಪಕ್ಕೆ ತರಲು, ಮುಂದುವರಿಸಿಕೊಂಡು ಹೋಗಲು ಕಸ್ತೂರಬಾ ಗಾಂಧಿ ಆಶ್ರಮಗಳನ್ನು ಸ್ಥಾಪಿಸಿ ಅದರಡಿಯಲ್ಲಿ ಈ ಎಲ್ಲಾ ಕಾರ್ಯ ಯೋಜನೆಗಳನ್ನು ಕಾರ್ಯಗತಗೊಳಿಸಲು ಅಪಾರವಾಗಿ ಶ್ರಮಿಸಿರುತ್ತಾರೆ. ಅದರಂತೆ ಮಂಡ್ಯ ಜಿಲ್ಲೆಯ ಅನೇಕ ಕಡೆ ಸೇರಿದಂತೆ 1948-49 ರಲ್ಲಿ ಮಹರ್ನವಮಿ ದೊಡ್ಡಿಯಲ್ಲಿ ಮೂರು ಎಕರೆ, ಹರಳಹಳ್ಳಿಯಲ್ಲಿ 7 ಎಕರೆ, ಮರಳಿಗ ಗ್ರಾಮದಲ್ಲಿ 10 ಎಕರೆ, ಕೀಳಘಟ್ಟ ಗ್ರಾಮದಲ್ಲಿ 5 ಎಕರೆ, ಬೂದನೂರು ಗ್ರಾಮದಲ್ಲಿ 8 ಎಕರೆ, ಜಿ ಕೆಬ್ಬಳ್ಳಿಯಲ್ಲಿ 5ಎಕರೆ ಜಮೀನನ್ನು ಯಶೋದರಮ್ಮ ದಾಸಪ್ಪ ಅವರು ಖರೀದಿಸಿ ,ಮತ್ತೆ ಉಚಿತವಾಗಿ ರೈತರಿಗೆ ನೀಡಿ ಅಲ್ಲಿ ಬೆಳೆಯನ್ನ ಬೆಳೆದು ಕಸ್ತೂರಬಾ ಗಾಂಧಿ ಆಶ್ರಮದಲ್ಲಿ ಕಲಿಯುವ ಹಾಗೂ ಸರ್ಕಾರಿ ಶಾಲೆಯಲ್ಲಿ ಕಲಿಯುವ ಹೆಣ್ಣುಮಕ್ಕಳಿಗೆ ಉಚಿತ ಆಹಾರವನ್ನ ಪೂರೈಸಲು ವ್ಯವಸ್ಥೆ ಮಾಡಿದ್ದರು .

ಇದರ ಜೊತೆಗೆ ಮಹರ್ನವಮಿದೊಡ್ಡಿ ಗ್ರಾಮದಲ್ಲಿ ಅಶ್ವಥಮ್ಮ ಅವರು ದಾನವಾಗಿ ನೀಡಿದ 5 ಕುಂಟೆ ಜಾಗದಲ್ಲಿ 1953ರಲ್ಲಿ ಕಸ್ತೂರಬಾ ಗಾಂಧಿ ಆಶ್ರಮವನ್ನು ನಿರ್ಮಿಸಿ ಬಾಲವಾಡಿ ಶಿಕ್ಷಣ ಹಾಗೂ ಮಹಿಳೆಯರಿಗೆ ಉಚಿತ ಹೊಲಿಗೆ ತರಬೇತಿ ಕೊಡಿಸಲು ಕೇಂದ್ರ ಪ್ರಾರಂಭಿಸಿದರು. ನಂತರದ ದಿನಗಳಲ್ಲಿ ಪೋಷಣೆ ಇಲ್ಲದೆ ಆಶ್ರಮ ಶಿಥಿಲಾವಸ್ಥೆಗೆ ತಲುಪಿತ್ತು. 2023 ರಲ್ಲಿ ಗ್ರಾಮಕ್ಕೆ ಭೇಟಿ ನೀಡಿದ ಅಪರ ಜಿಲ್ಲಾಧಿಕಾರಿಗಳಾದ ಡಾ. ಎಚ್ ಎಲ್ ನಾಗರಾಜ್, ರೈತ ನಾಯಕಿ ಸುನಂದಾ ಜಯರಾಮ್ ,ಗಾಂಧಿ ವಾದಿ ನಿವೃತ್ತ ಪ್ರಾಧ್ಯಾಪಕರಾದ ಪ್ರೊ. ಜಿ ಬಿ ಶಿವರಾಜ್ ಅವರು ಹಳೆಯ ಕಟ್ಟಡವನ್ನು ಕೆಡವಿ ವಿನೂತನ ಆಶ್ರಮದ ಕಟ್ಟಡವನ್ನು ನಿರ್ಮಿಸಿ ಮತ್ತೊಮ್ಮೆ ಆ ಜಾಗಕ್ಕೆ ಚೈತನ್ಯ ತುಂಬಿ ಯಶೋದರಮ್ಮ ದಾಸಪ್ಪ ಅವರ ಪುಣ್ಯ ಕಾರ್ಯಗಳನ್ನು ಮುಂದುವರೆಸುವಂತಾಗಬೇಕೆಂಬ ಉದ್ದೇಶದಿಂದ ಗ್ರಾಮಸ್ಥರಲ್ಲಿ ಈ ಬಗೆಗೆ ಅರಿವು ಮೂಡಿಸಿ ಈ ಶಿಬಿರ ಆಯೋಜನೆಗೊಳ್ಳಲು ಕಾರ್ಯಕ್ರಮ ರೂಪಿಸಲು ಪ್ರಮುಖ ಕಾರಣಕರ್ತರಾದರು. ಇದಕ್ಕೆ ನೆರವಾಗಿ ಗ್ರಾಮ ಪಂಚಾಯಿತಿ ಸದಸ್ಯರು ಆಶ್ರಮದ ಪ್ರತಿನಿಧಿಗಳು ಗ್ರಾಮದ ಮುಖಂಡರು ಮೇಲೆ ಸೂಚಿಸಿದ ಎಲ್ಲಾ ಸಂಸ್ಥೆಗಳ ಪ್ರತಿನಿಧಿಗಳು ಆರ್ಥಿಕವಾಗಿ



ಊರಿನ ಸರ್ಕಾರೀ ಶಾಲೆಯ ಗೋಡೆಗೆ ಸುಣ್ಣ ಬಣ್ಣ. ..

ನೈತಿಕವಾಗಿ ಬೆಂಬಲ ನೀಡಿದರು.

ಕನಿಷ್ಠ ಮೌಲ್ಯಗಳನ್ನು ಇಟ್ಟುಕೊಂಡು ಇಂದಿನ ಯುವ ಸಮೂಹ ಗಟ್ಟಿಯಾಗಿ ಬದುಕಬೇಕೆಂಬುದು ಗಾಂಧಿ ಆಶಯ ಹಾಗೂ ಎನ್‌ಎಸ್‌ಎಸ್ ನ ಆಶಯವಾಗಿದೆ . ಎನ್ ಎಸ್ ಎಸ್ ಮುಖಾಂತರ ಇಡೀ ರಾಷ್ಟದಲ್ಲಿ ಯುವಕರಿಗೆ ಮತ್ತು ಜನಸಾಮಾನ್ಯರಿಗೆ ಗಾಂಧಿ ತತ್ವಗಳನ್ನು ಗಟ್ಟಿಯಾಗಿ ಬಿತ್ತುವ ಕನಿಷ್ಠ ಪ್ರಮಾಣದ ಪ್ರಾಮಾಣಿಕ ಪ್ರಯತ್ನವನ್ನು ಕರ್ನಾಟಕ ರಾಜ್ಯ ಮಾಡಿರುವಷ್ಟು ಬೇರೆ ಯಾವ ರಾಜ್ಯವು ಮಾಡಿಲ್ಲ ಎಂಬ ಹೆಮ್ಮೆ ಆ ನಿಟ್ಟಿನಲ್ಲಿ ಶ್ರಮಿಸುತ್ತಿರುವ ಹಿರಿಯರ ಪ್ರಬಲ ನಂಬಿಕೆಯಾಗಿದೆ.

ಈ ದಿಶೆಯಲ್ಲಿ ದೆಹಲಿ ಗಾಂಧೀ ಸ್ಮಾರಕ ನಿಧಿ ಕಸ್ತೂರಬಾ ಗಾಂಧಿ ಆಶ್ರಮ ಅರಸೀಕೆರೆ, ಬೆಂಗಳೂರು ಗಾಂಧಿ ಸ್ಮಾರಕ ನಿಧಿ ಇಲ್ಲೆಲ್ಲ ಖಾಯಂ ಸದಸ್ಯರಾಗಿ, ಕಾರ್ಯದರ್ಶಿಯಾಗಿ, ಉಪಾಧ್ಯಕ್ಷರಾಗಿ ಕಾರ್ಯನಿರ್ವಹಿಸಿ ಕರ್ನಾಟಕದ ಅನೇಕ ಕಡೆಗಳಲ್ಲಿ ಇರುವ ಕಸ್ತೂರಬಾ ಗಾಂಧಿ ಆಶ್ರಮದ ಪುನರುಜ್ಜೀವನ ಕಾರ್ಯಕ್ಕೆ ತಮ್ಮನ್ನು ತಾವು ಅರ್ಪಿಸಿಕೊಂಡು ಆ ನಿಟ್ಟಿನಲ್ಲಿ ನಿರಂತರವಾಗಿ ಶ್ರಮಿಸುತ್ತಾ ಬಂದಿರುವ ಪ್ರೊ. ಜಿ ಬಿ ಶಿವರಾಜು ಅವರ ಒಂದೇ ಒಂದು ಮಹತ್ವಾಕಾಂಕ್ಷೆ ಎಂದರೆ ಅತ್ತಿತ್ತ ಹರಿದು ಹೋಗುತ್ತಿರುವ ಯುವಶಕ್ತಿಯನ್ನು ಸಂಚಯಗೊಳಿಸಿ ಅವರ ಮನಸ್ಸುಗಳನ್ನು ಗಾಂಧಿ ವಿಚಾರಧಾರೆಗಳ ಮೂಲಕ ಪರಿಷ್ಕರಿಸಿ ಸರಿದಾರಿಗೆ ತರುವ ಕನಿಷ್ಠ ಕೆಲಸವನ್ನಾದರೂ ನಮ್ಮಂತಹ ಹಿರಿಯರು ಮಾಡಬೇಕಾಗಿರುವುದು ನಮ್ಮ ಕರ್ತವ್ಯ. ಇದು ಸಮಾಜದ ಋಣ ತೀರಿಸುವ ಕೆಲಸವಷ್ಟೇ ಎಂಬ ವಿನಮ್ರಭಾವದಿಂದ ತಮ್ಮೊಟ್ಟಿಗೆ ಹಾಗೂ ತಮ್ಮ ಇಚ್ಛಾಶಕ್ತಿಗೆ ಸ್ಪಂದಿಸುವ ಹತ್ತಾರು ಚಿಂತಕರನ್ನ ,ಗಾಂಧಿತತ್ವ ಪ್ರಚಾರಕರನ್ನು, ಅಧಿಕಾರಿಗಳನ್ನು, ಅಧ್ಯಾಪಕರನ್ನು, ಸ್ವಯಂಸೇವಕರನ್ನ ಒಟ್ಟುಗೂಡಿಸಿಕೊಂಡು ಮುನ್ನಡೆಯುತ್ತಿರುವ ಪ್ರಯತ್ನದ ಫಲವೇ ಈ ಶಿಬಿರ ಸಾಕಾರಗೊಳ್ಳಲು ಸಾಧ್ಯವಾಯಿತು.

ಶಿಬಿರದ ಅಂಗವಾಗಿ ದಿನಾಂಕ 12.03.2024 ಮಂಗಳವಾರದಂದು ಶಿಬಿರದ ಮೊದಲನೇ ದಿನದ ಉದ್ಘಾಟನಾ ಕಾರ್ಯಕ್ರಮಕ್ಕೆ ಪೂರ್ವಭಾವಿಯಾಗಿ ಕಸ್ತೂರಬಾ ಗಾಂಧಿ ಆಶ್ರಮದ ಹಳೆಯ ಕಟ್ಟಡವಿದ್ದ ಜಾಗದಲ್ಲಿ ನೂತನ ಕಟ್ಟಡಕ್ಕೆ



ಅಪರ ಜಿಲ್ಲಾಧಿಕಾರಿಗಳಾದ ಡಾ. ಎಚ್ ಎಲ್ ನಾಗರಾಜ್ ಅವರು ಗ್ರಾಮಸ್ಥರು ,ಗಾಂಧಿ ಭವನದ ಹಾಗೂ ಕಸ್ತೂರಬಾ ಗಾಂಧಿ ಆಶ್ರಮದ ಪ್ರತಿನಿಧಿಗಳು ಮತ್ತು ಇತರ ಗಣ್ಯರ ಸಹಕಾರದೊಂದಿಗೆ ನೂತನ ಕಟ್ಟಡದ ಶಂಕುಸ್ಥಾಪನೆಗೆ ಗುದ್ದಲಿ ಪೂಜೆ ನೆರವೇರಿಸಿದರು. ನಂತರ ಶಿಬಿರದ ಉದ್ಘಾಟನೆಯನ್ನ ನೆರವೇರಿಸಿ ಮಾತನಾಡಿದ ಶ್ರೀಯುತರು ಈ ಶಿಬಿರದಲ್ಲಿ ಭಾಗಿಯಾದ ನನಗೆ ವೈಯಕ್ತಿಕವಾಗಿ ಇಲ್ಲೊಂದು ಇತಿಹಾಸ ನಿರ್ಮಾಣ ಮಾಡಬಹುದೆಂಬ ನಂಬಿಕೆ ಉಂಟಾಗಿದೆ. ರಾಷ್ಟ್ರಪಿತ ಮಹಾತ್ಮ ಗಾಂಧಿ ಅವರ ಶ್ರೇಷ್ಠತೆಗೆ ಗೌರವ ಮತ್ತು ಅಭಿಮಾನಕ್ಕೆ ಕಾರಣಕರ್ತರಾಗಿರುವ ಕಸ್ತೂರಬಾ ಗಾಂಧಿಯವರ ಹೆಸರಿನಲ್ಲಿ ಈ ನಾಡಿನ ಘನತೆವೆತ್ತ ಧೀರ ಮಹಿಳೆಯಾಗಿ ಯಶೋಧರಮ್ಮದಾಸಪ್ಪ ಅವರು ಗಾಂಧಿ ಕುಟುಂಬದ ಆಶೀರ್ವಾದ ಪಡೆದು ಒಬ್ಬ ಶ್ರೇಷ್ಠ ರಾಜಕೀಯ ಮುತ್ಸದ್ದಿಯಾಗಿ ಅಬಲೆಯರ, ಶೋಷಿತರ ಉದ್ಧಾರಕ್ಕಾಗಿ ಆಶ್ರಮಗಳನ್ನು ನಿರ್ಮಿಸಿದವರು. ಅದರ ಒಂದು ಬೆಳಕು ಈ ಮಹರ್ನವಮಿ ದೊಡ್ಡಿ ಗ್ರಾಮದಲ್ಲಿ ಇತ್ತು. ಅದನ್ನು ಪುನರುತ್ಥಾನ ಮಾಡಬೇಕೆಂಬ ಉದ್ದೇಶದಿಂದ ಆ ಕಟ್ಟಡಕ್ಕೆ ಮರುಜೀವ ನೀಡಿ ಮತ್ತೊಮ್ಮೆ ಚೈತನ್ಯಶಾಲಿ ಕೆಲಸಗಳಿಗೆ ನಾಂದಿ ಆಗಬೇಕೆಂಬ ಉದ್ದೇಶದಿಂದ ಈ ಕಾರ್ಯಕ್ರಮ ರೂಪಿಸಿರುವುದು ಸ್ವಾಗತಾರ್ಹ ಎಂದು ತಿಳಿಸಿದರು.

ಯಶೋದರಮ್ಮ ದಾಸಪ್ಪ ಅವರ ಸಂಸ್ಮರಣೆ ಮಾಡಿದ ಕರ್ನಾಟಕ ಗಾಂಧೀ ಸ್ಮಾರಕ ಟ್ರಸ್ಟ್ ಅಧ್ಯಕ್ಷರಾದ ನಾಡೋಜ ಡಾ. ವೂಡೇ.ಪಿ ಕೃಷ್ಣ ಅವರು ವಿದ್ಯಾರ್ಥಿಗಳು ಪ್ರತಿ ಕ್ಷಣ ಶಿಬಿರದಲ್ಲಿ ಎಲ್ಲ ಸಂಗತಿಗಳನ್ನು ತಿಳಿದುಕೊಳ್ಳುವ ಮೂಲಕ ಆದರ್ಶ ವ್ಯಕ್ತಿತ್ವ ರೂಡಿಸಿಕೊಳ್ಳಬೇಕು. ಯಶೋದರಮ್ಮ ದಾಸಪ್ಪ ಅವರನ್ನು ವಿದ್ಯಾರ್ಥಿಯಾಗಿದ್ದಾಗಲೇ ಕಾಣುವ ಸೌಭಾಗ್ಯ ನನಗೆ 1979 ರಲ್ಲಿ ದೊರೆಯಿತು. ಒಬ್ಬ ಧೀಮಂತ ಮಹಿಳೆ .ಇಂಥವರನ್ನು ಆದರ್ಶವಾಗಿಟ್ಟುಕೊಳ್ಳಬೇಕು. ಮಹಿಳಾ ದಿನಾಚರಣೆಯಲ್ಲಿ ಎಲ್ಲಾ ಕನ್ನಡಿಗರು ನೆನೆಯಲೇಬೇಕಾದ ವಿಶೇಷ ಮಹಿಳೆ ಯಶೋಧರಮ್ಮ ಅವರು.ಆದರೆ ಈ ದೇಶದ ದುರಂತವೆಂದರೆ ರಾಜಕೀಯ ಹುದ್ದೆಯ ಹೊರತಾಗಿ ರಚನಾತ್ಮಕ ಕೆಲಸಗಳಲ್ಲಿ ತೊಡಗಿದ್ದ ಯಶೋದರಮ್ಮನವರ ಸೇವೆಯನ್ನು ನಮ್ಮ ನಾಡು ಗಮನಿಸಲ್ಲ. ಈ ಕಾಲ ಅಧಿಕಾರವನ್ನು, ಶ್ರೀಮಂತಿಕೆಯನ್ನು ಪೂಜಿಸುವ ಕಾಲ .ಎಲ್ಲವನ್ನು ತ್ಯಜಿಸಿ ಸಮಾಜಕ್ಕೆ ತಮ್ಮನ್ನು ಅರ್ಪಣೆ ಮಾಡಿಕೊಂಡ ಇಂಥ ಮಹನೀಯರನ್ನು ಗುರುತಿಸಿ ಗೌರವಿಸುವ ಕೆಲಸ ತುಂಬಾ ಕಡಿಮೆ .ಅಂತಹದರಲ್ಲಿ ಪ್ರೊ. ಜಿ ಬಿ ಶಿವರಾಜ್, ಸುನಂದಾ ಜಯರಾಮ್ ಮೊದಲಾದವರು ಯಶೋಧರಮ್ಮದಾಸಪ್ಪನವರ ಕಾರುಣ್ಯವಿರುವ ಈ ಗ್ರಾಮದಲ್ಲಿ ಇಂತಹ ಪುಣ್ಯವಂತರನ್ನು ಸ್ಮರಿಸುವ, ಅವರ ಆದರ್ಶಗಳನ್ನು ಯುವ ಜನಾಂಗಕ್ಕೆ

ತಲುಪಿಸುವ ಕೆಲಸವನ್ನು ಈ ಶಿಬಿರದ ಮುಖೇನ ಮಾಡುತ್ತಿರುವುದು ಬಹಳ ಮಹತ್ವದ ಕೆಲಸ ಎಂದು ಶ್ಲಾಘಿಸಿದರು.

ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಭಾಗಿಯಾಗಿದ್ದ ರಾಜ್ಯ ಎನ್‌ಎಸ್‌ಎಸ್‌ನ ಕೋಶ ಸಂಯೋಜನಾಧಿಕಾರಿಗಳಾದ ಡಾ. ಪ್ರತಾಪ್ ಲಿಂಗಯ್ಯ ಅವರು ಆಶಯ ನುಡಿಗಳನ್ನು ಆಡಿದರು . ಶಿಬಿರಕ್ಕೆ ಶುಭ ಕೋರಿದ ಯಶೋಧರಮ್ಮ ರವರ ಸೊಸೆ ಸರೋಜಮ್ಮ ತುಳಸಿದಾಸ್ ಅವರನ್ನು ಕಾಣುವ, ಆಶೀರ್ವಾದ ಪಡೆಯುವ ಭಾಗ್ಯ ಈ ಶಿಬಿರದಲ್ಲಿ ಸಾಧ್ಯವಾಯಿತು. ಪ್ರತಿಜ್ಞಾವಿಧಿಯನ್ನು ಕರ್ನಾಟಕ ರಾಜ್ಯ ಮಧ್ಯಪಾನ ಸಂಯಮ ಮಂಡಳಿ ಕಾರ್ಯದರ್ಶಿಗಳಾದ ಶ್ರೀ ಎನ್ ಎಸ್ ಮಹೇಶ್ ಅವರು ಬೋಧಿಸಿದರು. ಇಂದೋರ್ ಕಸ್ತೂರಬಾ ಗಾಂಧಿ ಟ್ರಸ್ಟಿನ ಟ್ರಸ್ಟಿಗಳಾದ ಎನ್ ಆರ್ ವಿಶುಕುಮಾರ್ ಅವರು ಅಧ್ಯಕ್ಷತೆ ವಹಿಸಿ ಯಶಸ್ವಿಯಾಗಿ ನಡೆಸಿಕೊಟ್ಟರು.

**ಶಿಬಿರದಲ್ಲಿ ಸಾಕಾರಗೊಂಡ ಗುರಿ ಉದ್ದೇಶಗಳು:**

ಮಹಿಳೆಯರ ಆರ್ಥಿಕ ಸಾಮಾಜಿಕ ಸಬಲೀಕರಣಕ್ಕಾಗಿ ಯಶೋದರಮ್ಮ ದಾಸಪ್ಪ ಅವರು ಕರ್ನಾಟಕದ ಇತರೆ ಭಾಗಗಳಲ್ಲಿಯಂತೆ ಮಂಡ್ಯ ಜಿಲ್ಲೆ, ಮದ್ದೂರು ತಾಲೂಕು, ಮಹರ್ನವಮಿ ದೊಡ್ಡಿ ಗ್ರಾಮದಲ್ಲಿ ಸ್ಥಾಪಿಸಿದ್ದ ಕಸ್ತೂರಬಾ ಗಾಂಧಿ ಆಶ್ರಮ ಹಲವು ವರ್ಷಗಳ ಕಾಲ ಯಶಸ್ವಿಯಾಗಿ ಕಾರ್ಯನಿರ್ವಹಿಸಿ ನಂತರದ ದಿವಸಗಳಲ್ಲಿ ಕುಂಟಿತಗೊಂಡು ಕಟ್ಟಡ ಶಿಥಿಲಾವಸ್ಥೆ ತಲುಪಿ ಗಿಡಗಂಟೆಗಳು ಬೆಳೆದು ಅನುಪಯುಕ್ತವಾಗಿ ಆಶ್ರಮದ ಜಾಗ ಒತ್ತುವರಿಯಾಗಿ ಅನಾಥಾವಸ್ಥೆಯಲ್ಲಿತ್ತು. ಈ ಪರಿಸ್ಥಿತಿಯನ್ನು ಅರಿತ ಪ್ರೊ. ಜಿ ಬಿ ಶಿವರಾಜು ರೈತ ನಾಯಕಿ ಸುನಂದಾ ಜಯರಾಮ್ ಅವರ ಕಾಳಜಿ ಒತ್ತಾಸೆಯ ಮೇರೆಗೆ ಹಿಂದೊಮ್ಮೆ ಗ್ರಾಮಕ್ಕೆ ಭೇಟಿ ನೀಡಿದ ಅಪರ ಜಿಲ್ಲಾಧಿಕಾರಿಗಳು ಡಾ. ಎಚ್ ಎಲ್ ನಾಗರಾಜು ಅವರು ಇದರ ಪುನರುಜ್ಜೀವನಕ್ಕೆ ಒತ್ತಾಸೆಯಾಗಿ ಸಹಕರಿಸಿದ್ದರ ಮೇರೆಗೆ ಆಶ್ರಮದ ಆಸ್ತಿಪಾಸ್ತಿಗಳ ಬಗೆಗಿನ ಕಾನೂನಾತ್ಮಕ ಸಮಸ್ಯೆಗಳನ್ನು ಪರಿಹರಿಸಿಕೊಂಡು ಆಸ್ತಿಯನ್ನು ಸಂರಕ್ಷಿಸಿ ಹಳೆಯ ಕಟ್ಟಡವನ್ನು ಕೆಡವಿ ನೂತನ ಕಟ್ಟಡಕ್ಕೆ ಶಂಕುಸ್ಥಾಪನೆ ನೆರವೇರಿಸಿ ಮುಂದೆ ಹೊಸ



ಕಟ್ಟಡ ನಿರ್ಮಿಸಲು ಬೇಕಾದ ಆರ್ಥಿಕ ಸಂಪನ್ಮೂಲ ಹಾಗೂ ನೈತಿಕ ಬೆಂಬಲಕ್ಕೆ ಬೇಕಾದ ಸಂಪನ್ಮೂಲದ ಕ್ರೋಡೀಕರಣ ಸಹಕಾರಕ್ಕಾಗಿ ಈ ಶಿಬಿರದ ಮುಖೇನ ಚಾಲನೆ ದೊರೆಯಿತು.

ಶಿಬಿರದ ಕ್ರಿಯಾಯೋಜನೆಯಲ್ಲಿ ಮುಖ್ಯವಾದದ್ದು ಉಪನ್ಯಾಸ ಮಾಲಿಕೆ. ಯಾವುದೇ ಶಿಬಿರಗಳಲ್ಲಿ ಶಿಬಿರಾರ್ಥಿಗಳು ಮತ್ತು ಗ್ರಾಮಸ್ಥರಿಗೆ ಉಪಯುಕ್ತವಾಗಬಲ್ಲ ವಿವಿಧ ಇಲಾಖೆಗಳ ಯೋಜನೆಗಳನ್ನು ಗ್ರಾಮಸ್ಥರು ಪಡೆಯುವ ಬಗ್ಗೆ ಹಾಗೂ ವಿದ್ಯಾರ್ಥಿಗಳಿಗೆ ಬೋಧನಾಪ್ರದವಾದ ಬದುಕಿನ ಮೌಲ್ಯಗಳನ್ನು ವಿಸ್ತರಿಸುವ ಹತ್ತು ಹಲವು ಸಂಗತಿಗಳನ್ನು ಕುರಿತು ವಿಶೇಷ ಉಪನ್ಯಾಸಗಳಿರುತ್ತವೆ. ಪ್ರಸ್ತುತ ಶಿಬಿರ ಗಾಂಧಿತತ್ವ ಪ್ರೇರಿತ ಯುವಜನ ಪ್ರೇರಣಾ ಶಿಬಿರವಾಗಿದ್ದು ವ್ಯಸನ ಮುಕ್ತ ಸಮಾಜಕ್ಕಾಗಿ ಯುವಜನತೆಯನ್ನು ಅಣಿಗೊಳಿಸುವ ಉದ್ದೇಶವನ್ನು ಹೊಂದಿದ್ದು ಶಿಬಿರದ ಪ್ರತಿದಿನವೂ ಗಾಂಧಿ ತತ್ವಗಳನ್ನು ಆಧರಿಸಿ ಸಮಕಾಲೀನ ಸಂದರ್ಭದಲ್ಲಿ ದೇಶದ ಸಮಗ್ರ ಪ್ರಗತಿಗೆ ,ಸ್ವಸ್ಥ ಸಮಾಜ ನಿರ್ಮಾಣಕ್ಕೆ ಅವು ಹೇಗೆ ದಿವ್ಯ ಔಷಧಗಳಾಗಬಲ್ಲವು ಎಂಬುದನ್ನು ಶಿಬಿರಾರ್ಥಿಗಳಿಗೆ ಹಾಗೂ ಜನಸಾಮಾನ್ಯರಿಗೆ ತಲುಪಿಸುವ ಸಲುವಾಗಿ ಮೌಲ್ಯಯುತ ವಿಷಯಗಳನ್ನು ಆಯ್ಕೆ ಮಾಡಿ ಅವುಗಳನ್ನು ಅಷ್ಟೇ ಸಮರ್ಥವಾಗಿ ಸಮೂಹಕ್ಕೆ ದಾಟಿಸಬಲ್ಲ ಗಣ್ಯ, ತಜ್ಞ, ಆದರ್ಶ ವ್ಯಕ್ತಿಗಳನ್ನು ಗೊತ್ತು ಮಾಡಿ ಆ ವ್ಯಕ್ತಿಗಳ ಸಾಧನೆ ಮತ್ತು ಅವರ ವಿಚಾರಧಾರೆಗಳು ಇಂದಿನ ಯುವ ಸಮೂಹಕ್ಕೆ ಪ್ರೇರಣೆಯಾಗಬೇಕು, ಮಾರ್ಗದರ್ಶಕವಾಗಬೇಕು ಎಂಬ ಉದ್ದೇಶದಿಂದ ಮೌಲ್ಯಯುತ ವಿಷಯಗಳನ್ನು ಅಳವಡಿಸಲಾಗಿತ್ತು.

'ಗಾಂಧೀಜಿಯ ಪರಿಕಲ್ಪನೆಯಲ್ಲಿ ಶಿಕ್ಷಣ ಹಾಗೂ ವರ್ತಮಾನದ ಸವಾಲುಗಳು, ಗಾಂಧೀಜಿ ಗ್ರಾಮ ಭಾರತ ಪರಿಕಲ್ಪನೆ, ಜೀವನ ಮೌಲ್ಯಗಳು ಮತ್ತು ಯುವಜನತೆ, ವ್ಯಕ್ತಿತ್ವ ನಿರ್ಮಾಣದಲ್ಲಿ ಸ್ವಾಮಿ ವಿವೇಕಾನಂದರ ವಿಚಾರಗಳು, ರಾಷ್ಟ್ರೀಯ ಭಾವೈಕ್ಯತೆ ಮತ್ತು ಯುವಜನತೆ ,ಗಾಂಧೀಜಿ ಜೊತೆಗಿನ ವಾಗ್ವಾದಗಳು ;ಇಂದು ಬೇಕಾಗಿರುವುದು ಗಾಂಧಿ ಅಂಬೇಡ್ಕರ್ ವಿಚಾರಗಳ ಘರ್ಷಣೆಗಳಲ್ಲ ಸಮನ್ವಯತೆ, ವ್ಯಸನ ಮುಕ್ತ ಸಮಾಜ ಮತ್ತು ಯುವ ಜನತೆ, ಗಾಂಧಿ ದೃಷ್ಟಿಯಲ್ಲಿ ಮಹಿಳೆ ಮತ್ತು ಆಧುನಿಕ ಸಂದರ್ಭ ,ಜೀವನ ಕೌಶಲ್ಯ ಹಾಗೂ ಯುವಜನತೆ ಎಂಬ ಮೌಲ್ಯಯುತ ವಿಷಯಗಳನ್ನು ಕುರಿತು ಕ್ರಮವಾಗಿ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಮಾಜಿ ಅಧ್ಯಕ್ಷರು, ಗಾಂಧಿ ಭವನದ ಸದಸ್ಯರು ಆದ ಪ್ರೊ. ಎಸ್ ಜಿ ಸಿದ್ದರಾಮಯ್ಯ, ನಿವೃತ್ತ ಐಎಎಸ್ ಅಧಿಕಾರಿಗಳಾದ ಶ್ರೀ ಗೋಪಾಲಕೃಷ್ಣೇಗೌಡರು, ಸಾಹಿತಿಗಳು ಹಾಗೂ ಚಿಂತಕರಾದ ಡಾ. ಎಚ್ ಎನ್ ಮುರಳಿಧರ್, ಕೇಂದ್ರ ಮೀಸಲು ಪೊಲೀಸ್ ಪಡೆಯ ನಿವೃತ್ತ ಐಜಿಪಿಗಳಾದ ಶ್ರೀ ಕೆ ಅರ್ಕೇಶ್, ಮೈಸೂರಿನ ಚಿಂತಕರಾದ ಡಾ. ತುಕಾರಾಂ, ಬೆಂಗಳೂರು ಗಾಂಧಿ ಭವನ

ಕೋಶಾಧ್ಯಕ್ಷರಾದ ಶ್ರೀ ಎಚ್ ಬಿ ದಿನೇಶ್, ವಿಶ್ರಾಂತ ಪ್ರಾಂಶುಪಾಲರಾದ ಡಾ. ಲೀಲಾ ಅಪ್ಪಾಜಿ, ಸಂಸ್ಕೃತಿ ಚಿಂತಕರಾದ ಪ್ರೊ. ಕೃಷ್ಣೇಗೌಡ ,ಮಂಡ್ಯ ವಿ.ವಿ ಮಾನ್ಯ ಕುಲಪತಿಗಳಾದ ಡಾ. ಪುಟ್ಟರಾಜು, ಕಸ್ತೂರಬಾ ಗಾಂಧಿ ಆಶ್ರಮ ಇಂದೋರ್ ಹಾಗೂ ಗಾಂಧಿ ಭವನ ಉಪಾಧ್ಯಕ್ಷರಾದ ಶ್ರೀ ಎನ್ ಆರ್ ವಿಶುಕುಮಾರ್, ಹೆಚ್ .ಸಿ ದಾಸಪ್ಪ ಸಾರ್ವಜನಿಕ ವಿಚಾರ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀಮತಿ ಸರೋಜಮ್ಮ ತುಳಸಿದಾಸ್, ಕರ್ನಾಟಕ ಮದ್ಯಪಾನ ಸಂಯಮ ಮಂಡಳಿಯ ಕಾರ್ಯದರ್ಶಿಗಳಾದ ಶ್ರೀ ಎನ್ ಎಸ್ ಮಹೇಶ್, ವಿಶ್ರಾಂತ ಕಾರ್ಯಕ್ರಮ ಸಂಯೋಜನಾಧಿಕಾರಿಗಳಾದ ಡಾ. ಕೆ ಕಾಳಚನ್ನೇಗೌಡ ,ಹೆಚ್.ಸಿ ದಾಸಪ್ಪ ಸಾರ್ವಜನಿಕ ವಿಚಾರ ಸಂಸ್ಥೆ ಹಣಕಾಸು ಸಮಿತಿ ಅಧ್ಯಕ್ಷರಾದ ಡಾ. ಬಿ ಬೋರೇಗೌಡ ,ಕಸ್ತೂರಬಾ ಗಾಂಧಿ ಆಶ್ರಮ ಅರಸೀಕೆರೆ ಸಲಹಾ ಸಮಿತಿ ಸದಸ್ಯರಾದ ಶ್ರೀ ಕೆ ಜಿ ಶ್ರೀನಿವಾಸ್, ಗಾಂಧಿ ಭವನ ಬೆಂಗಳೂರು ಗೌರವ ಕಾರ್ಯದರ್ಶಿಗಳಾದ ಶ್ರೀ ಎಂ ಸಿ ನರೇಂದ್ರ ,ನಿವೃತ್ತ ಪ್ರಾಚಾರ್ಯರಾದ ಪ್ರೊ. ಜಿ ಟಿ ವೀರಪ್ಪ ,ಮಾನಸ ಶಿಕ್ಷಣ ಸಂಸ್ಥೆಯ ಅಧ್ಯಕ್ಷರಾದ ವಿ.ಕೆ ಜಗದೀಶ್ ,ರೈತ ಮುಖಂಡರಾದ ಶ್ರೀ ಕೆ ಬೋರಯ್ಯ ವಿಶ್ವಮಾನವ ಶಾಲೆ ಸಂಸ್ಥಾಪಕರಾದ ಪ್ರೊ.ಬಿ.ಕೆ ಚಂದ್ರಶೇಖರಗೌಡ, ಭೂಮಾಪನ ಇಲಾಖೆ ಜಂಟಿ ನಿರ್ದೇಶಕರಾದ ಪ್ರೊ. ಮರಿಸ್ವಾಮಿಗೌಡ, ಗಾಂಧಿ ಭವನದ ಸದಸ್ಯರಾದ ಡಾ. ಅಭಿಧಾಬೇಗಂ ,ಮೈಸೂರು ವಿ. ವಿ ಕಾರ್ಯಕ್ರಮ ಸಂಯೋಜನೆ ಅಧಿಕಾರಿಗಳಾದ ಎಂ ಬಿ ಸುರೇಶ್ ಮೊದಲಾದ ಗಣ್ಯರು ಪ್ರೀತಿಯಿಂದ ಶಿಬಿರದಲ್ಲಿ ಭಾಗವಹಿಸಿ ತಮ್ಮ ಅನುಭವ ಮತ್ತು ಚಿಂತನೆಗಳನ್ನು ವೇದಿಕೆಗಳಲ್ಲಿ ಹಂಚಿಕೊಳ್ಳುವ ಮೂಲಕ ಶಿಬಿರಾರ್ಥಿಗಳ ಹಾಗೂ ಗ್ರಾಮಸ್ಥರ ಮನಸೂರೆಗೊಂಡರು.

ಶಿಬಿರದಲ್ಲಿ ಭಾಗವಹಿಸಿದ ಎಲ್ಲಾ ಸಂಪನ್ಮೂಲ ವ್ಯಕ್ತಿಗಳು ಮಾತನಾಡುತ್ತಾ – – ಪ್ರೊ. ಜಿ. ಬಿ ಶಿವರಾಜ್ ಅವರು ಆಯೋಜಿಸುವ ಇಂಥ ಮಹತ್ವಪೂರ್ಣ ಕಾರ್ಯಕ್ರಮಗಳಲ್ಲಿ ಅವರು ಕರೆದಾಗಲೆಲ್ಲ, ಬರಲೇಬೇಕೆಂದಾಗ ಮರುಮಾತಿಲ್ಲದೆ ನಾವೆಲ್ಲ ಯಾಕೆ ಬರುತ್ತೇವೆಂದರೆ ಅಲ್ಲಿ ಕೇಳುವ ಒಂದಿಷ್ಟು ಒಳ್ಳೆಯ ಮನಸ್ಸುಗಳಿರುತ್ತವೆ ಎಂದು. ಇಂತಹ ಕಡೆಗಳಲ್ಲಿ ತೀರ ಕೆಟ್ಟವರು ಇರುವುದಿಲ್ಲ.




ಊರಿನ ಸಾರ್ವಜನಿಕ ನೀರಿನ ಟ್ಯಾಂಕ್ ಗೆ ಗಾಂಧಿ ಚಿತ್ರ ..

ಏನನ್ನಾದರೂ ಹೇಳಿದರೆ ಕನಿಷ್ಠ ನೂರರಲ್ಲಿ 40 ಮಂದಿಯಾದರೂ ಕೇಳಿಸಿಕೊಳ್ಳುತ್ತಾರೆ. ಸುತ್ತಮುತ್ತ ಒಂದಷ್ಟು ಒಳ್ಳೆಯ ಜನರು ಇರುತ್ತಾರೆ. ಅಂತಹ ವಾತಾವರಣದಲ್ಲಿ ಒಂದು ಸಣ್ಣ ಆದರ್ಶ ಬೆಳೆದಿರುತ್ತದೆ. ಹೇಗೆ ಹಸಿಗೋಡೆಗೆಕ ಹೊಡೆದ ಹರಳಿನಂತೆ ತಕ್ಷಣ ಕಚ್ಚಿಕೊಳ್ಳುತ್ತದೆಯೋ ಇಂತಹ ಕಡೆ ಹೇಳಿದ ತಕ್ಷಣ ವಿಷಯಗಳು ಕಚ್ಚಿಕೊಳ್ಳುತ್ತವೆ. ಎಂಬ ನಂಬಿಕೆ.

ಇಂದಿನ ಯುವ ಮನಸ್ಸುಗಳನ್ನು ಭ್ರಷ್ಟ ಗೊಳಿಸುವ ಶಕ್ತಿಗಳು ಬಹಳ ಪ್ರಬಲವಾಗಿವೆ. ಶಿಕ್ಷಣವೆಂದರೆ ಕೇವಲ ಕಲಿಯುವುದು, ಪರೀಕ್ಷೆ ಬರೆಯುವುದಲ್ಲ .ಆದರ್ಶ ಹಿಡಿದು ನಡೆಯಬೇಕು. ಪದವೀಧರ ಆಗುವುದಲ್ಲ ವಿದ್ಯಾವಂತರಾಗುವುದು ಮುಖ್ಯ. ನಮ್ಮದು ಮಾತು ಸೋತ ಭಾರತ. ನಮ್ಮ ಮಾತಿಗೆ ಶಕ್ತಿ ಬರಬೇಕೆಂದರೆ, ನಾವು ಆಡುವ ಪ್ರತಿ ಮಾತಿಗೆ ಬೆಲೆ ಸಿಗಬೇಕಾದರೆ ನಮ್ಮ ನಡವಳಿಕೆ ಅದಕ್ಕನುಗುಣವಾಗಿರಬೇಕು. ಮಾತಿಗೆ ಯಾರನ್ನಾದರೂ ಸೋಲಿಸುವ, ಒಪ್ಪಿಸಿಕೊಳ್ಳುವ ಶಕ್ತಿ ಇದೆ ಎಂಬುದನ್ನು ಗಾಂದಿ ನಮಗೆ ಮಾಡಿ ತೋರಿಸಿಕೊಟ್ಟಿದ್ದಾರೆ. ಇಂಥ ಶಿಬಿರಗಳಿಗೆ ಬಂದಾಗ ದೊಡ್ಡದೇನನ್ನು ಕಲಿಯಬೇಕಾಗಿಲ್ಲ ಅಥವಾ ಮಾಡಬೇಕಾಗಿಲ್ಲ. ನಾನು ಮಾಡಿದ ಒಂದು ಚಿಕ್ಕ ಕೆಲಸ ನನಗೆ ಸಮಾಧಾನ ತೃಪ್ತಿ ಕೊಟ್ಟಿದೆ ಎಂಬುದು ಮುಖ್ಯ.

ಹಳ್ಳಿಗಳಲ್ಲಿರುವ ರಸ್ತೆ ,ಚರಂಡಿ, ಕೆರೆಕಟ್ಟೆಗಳ ಸ್ವಚ್ಛತೆ ಇವೆಲ್ಲವನ್ನು ಸರ್ಕಾರ 5 ಲಕ್ಷ ಕೊಟ್ಟು ಒಂದೇ ದಿನದಲ್ಲಿ ಯಂತ್ರಗಳ ಮೂಲಕ ಮಾಡಿಸಿ ಬಿಡಬಹುದು. ಏಕೆಂದರೆ ಇದು ನಿಮ್ಮ ಊರಲ್ಲ. ಇಲ್ಲಿರುವವರಾರು ನಿಮ್ಮವರಲ್ಲ ಆದರೆ ಅಂತಹ ಊರಲ್ಲಿ ನೀವು ಬಂದು ಏಳು ದಿವಸ ಇದ್ದೀರಿ, ಅದೂ ಅನಾನುಕೂಲಗಳ ನಡುವೆ ಇದ್ದಿರಿ .ಇದು ನನಗೆ ದೊರೆತ ಒಂದು ಅವಕಾಶವೆಂದು ಪ್ರಾಮಾಣಿಕವಾಗಿ ತೊಡಗಿಸಿಕೊಂಡು ಕಲಿಯಬೇಕು .ನಮ್ಮ ಅಭಿಪ್ರಾಯಗಳನ್ನು ಪ್ರಾಮಾಣಿಕವಾಗಿ ಹೇಳುವಂತಿರಬೇಕು .ಇಲ್ಲಿ ಬರುವ ವಿಷಯಗಳನ್ನು ಶ್ರದ್ಧೆಯಿಂದ ಆಲಿಸಬೇಕು. ಯಾರ ಮಾತನ್ನು ನಂಬದೇ ಇರುವ ಸಿನಿಕತನ ಬಿಡಬೇಕು .ಈ ಪ್ರಪಂಚದಲ್ಲಿ ನಾವಿದ್ದೇವೆ, ನಮ್ಮ ಮನೆ ಪರಿಸರ, ನೆಲ ಹಿರಿಯರನ್ನು ಉತ್ಕಟವಾಗಿ ಪ್ರೀತಿಸಬೇಕು ನಮ್ಮ ಇಂದಿನ ಯುವ ಸಮೂಹ ಹಿರಿಯರು ಹೇಳುವುದನ್ನು ಉತ್ಕಟ ಪ್ರೀತಿಯಿಂದ ಕೇಳಿಸಿಕೊಳ್ಳುವ, ಮಾತನಾಡುವ ಬದ್ಧತೆಯನ್ನು ಬೆಳೆಸಿಕೊಳ್ಳಬೇಕು, ವಿದ್ಯಾರ್ಥಿಗಳು ಸಿನಿಕರಾಗಬೇಡಿ ,ಭರವಸೆ ನಂಬಿಕೆ ಕಳೆದುಕೊಳ್ಳಬೇಡಿ. ನಮ್ಮ ಶಿಕ್ಷಣ ನಮ್ಮ ಅನುಭವವಾಗುತ್ತಿಲ್ಲ .ಹೊರ ಜಗತ್ತು ನಮ್ಮೊಳಗೆ ಬರುತ್ತಿಲ್ಲ. 'ಗಾಂಧಿ ಒಬ್ಬ ವ್ಯಕ್ತಿಯಲ್ಲ ಆಲೋಚನಾ ವಿಧಾನ". ಒಡೆದಾಟ ಗುದ್ದಾಟದಿಂದ ಎದುರಾಳಿಗಳನ್ನು ಮಣಿಸಲು ಸಾಧ್ಯವಿಲ್ಲ ;ಪ್ರೀತಿಯಿಂದ ಮಣಿಸಬಹುದೆಂಬುದನ್ನು ತೋರಿಸಿಕೊಟ್ಟಿದ್ದಾರೆ .ಇಲ್ಲಿ ನೀವು ತೊಡಗಿಸಿಕೊಳ್ಳುವ ಪ್ರತಿಯೊಂದು ಕ್ರಿಯೆಗಳು ನಿಮ್ಮನ್ನು ಸಂಸ್ಕರಿಸುತ್ತಾ ಹೋಗುತ್ತವೆ. ನಿಮ್ಮ ಮನಸ್ಸಿನ ಮೇಲೆ ಗಾಢ ಪ್ರಭಾವ ಬೀರುತ್ತವೆ .ನಿರಂತರ ಏಳು ದಿನ ಬರಿಯ ಒಳ್ಳೆಯ ವಿಚಾರಗಳನ್ನು ಕೇಳಿಸಿಕೊಳ್ಳುತ್ತೀರಿ. ಹೊರ ಜಗತ್ತಿನ ಯಾವ ಕಲ್ಮಶಗಳು ಒಳಬಾರದೆ ಒಂದು ವಾರಗಳ ಕಾಲ ನಿಮ್ಮ ಮನಸ್ಸನ್ನು .ಪರಿಶುದ್ಧವಾಗಿ ,ಸ್ವಚ್ಛವಾಗಿ ಇಟ್ಟುಕೊಳ್ಳಲು ಪರಿಶ್ರಮ ಪಡುತ್ತೀರಿ .ಅದು ಇಂತಹ ಶಿಬಿರದ ಪರಿಣಾಮ.



ಶಿಬಿರದಲ್ಲಿ ಮಕ್ಕಳೂ ಕಲೆತು ಎಲ್ಲರೊಡನೆ ಬೆರೆತವು..ರೈತ ನಾಯಕಿ ಸುನಂದಾ ಜಯರಾಮ್ , ಬಾಲಕಿ ಭೂಮಿಕಾ ಮತ್ತು ಎನ್ ಎಸ್ ಎಸ್ ಅಧಿಕಾರಿ ಕೆಂಪಮ್ಮ..

ಶ್ರಮದಾನ ಯಾವುದೇ ಶಿಬಿರದ ಮುಖ್ಯ ಧ್ಯೇಯ .

ರಸ್ತೆ, ಕ್ರೀಡಾಂಗಣ, ಉದ್ಯಾನವನ, ನಿವೇಶನ, ಸ್ಮಾರಕಗಳ ಸಂರಕ್ಷಣೆ, ಸುಲಭ ಶೌಚಾಲಯ ನಿರ್ಮಾಣ ,ಸಾಮಾಜಿಕ ಅರಣ್ಯ ಮತ್ತು ಸಾಲುಮರಗಳ ನೆಡುವುದು, ಗ್ರಾಮದ ಕೆರೆ ಕೊಳ ಮತ್ತು ಬಾವಿಗಳ ಹೂಳು ತೆಗೆಯುವಿಕೆ ,ಒಳಚರಂಡಿ ದುರಸ್ತಿ, ಸಾರ್ವಜನಿಕ ಕಟ್ಟಡಗಳಿಗೆ ಸುಣ್ಣ ಬಣ್ಣ ಮೊದಲಾದ ರಚನಾತ್ಮಕ ಮತ್ತು ನೈರ್ಮಲ್ಯಕ್ಕೆ ಸಂಬಂಧಿಸಿದ ಶ್ರಮದಾನ

ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು. ಪ್ರಸ್ತುತ ಶಿಬಿರದಲ್ಲಿ ಅಂತಹ ಒಂದಷ್ಟು ಮಹತ್ವದ ರಚನಾತ್ಮಕ ನೈರ್ಮಲ್ಯ ಕಾರ್ಯಕ್ರಮಗಳು ಜರುಗಿದ್ದು ಶಿಬಿರದ ಮತ್ತೊಂದು ಗರಿಮೆ .ಈ ಗ್ರಾಮದಲ್ಲಿ ಶಿಬಿರವನ್ನು ಮಾಡಬೇಕೆಂಬ ಉದ್ದೇಶದಿಂದ ಪೂರ್ವಭಾವಿಯಾಗಿ ಗ್ರಾಮಕ್ಕೆ ಭೇಟಿ ನೀಡಿ ಶಿಬಿರಾರ್ಥಿಗಳು ಉಳಿದುಕೊಳ್ಳುವ ಸ್ಥಳ ಪರಿಶೀಲಿಸಲಾಗಿ ಗ್ರಾಮದ ಮುಖ್ಯ ರಸ್ತೆಯ ಪಕ್ಕದಲ್ಲಿರುವ ಸರ್ಕಾರಿ ಶಾಲೆ ಆವರಣವನ್ನು ಆಯ್ಕೆ ಮಾಡಿಕೊಳ್ಳಲಾಯಿತು.

ಊರಿನ ಆರಂಭದ ಮುಖ್ಯರಸ್ತೆಯಲ್ಲಿರುವ ಈ ಸರ್ಕಾರಿ ಶಾಲೆ ಸಂಪೂರ್ಣವಾಗಿ ಪ್ಲಾಸ್ಟಿಕ್, ಅನೇಕ ಜಾತಿಯ ಕಳೆಗಿಡ, ಮರದ ಒಣಗಿದ ಎಲೆ ಹೂಗಳಿಂದ ಸಂಪೂರ್ಣವಾಗಿ ಮುಚ್ಚಿ ಹೋಗಿ ಕಾಡನ್ನು ಪ್ರವೇಶಿಸಿದಂತೆ ಕಾಲಿಡಲು ಆಗುತ್ತಿರಲಿಲ್ಲ. ಶಾಲೆ ಇದೆ ಎಂಬ ಯಾವ ಕುರುಹು ಇಲ್ಲದಂತೆ ಅನಾಥವಾಗಿತ್ತು. ಇಲ್ಲಿ ಕೇವಲ ಒಂಬತ್ತು ವಿದ್ಯಾರ್ಥಿಗಳು ಮಾತ್ರ ವ್ಯಾಸಂಗ ಮಾಡುತ್ತಿದ್ದಾರೆ. ಶಾಲೆಯ ಒಳ ಆವರಣದಲ್ಲಿ ಅಂಗನವಾಡಿ ಕೇಂದ್ರವೂ ಇದೆ. ಶಾಲೆಯ ಬಲಭಾಗದಲ್ಲಿ ಹೊಸದಾಗಿ ಕಟ್ಟಿರುವ ಮೂರು ಕೊಠಡಿಗಳಿವೆ .ಹಳೆಯ ಕೊಠಡಿಗಳಂತೂ ವಾಸಕ್ಕೆ ಯೋಗ್ಯವಾಗದೆ ತುಂಬಾ ದಿನಗಳಿಂದ ಪಾಳು ಬಿದ್ದಿದ್ದು, ಇಂತಹ ಓಡಾಡಲು ಉಳಿದುಕೊಳ್ಳಲು ಅಸಾಧ್ಯವಾಗಿದ್ದ ಶಾಲಾ ಕೊಠಡಿಗಳು ಮತ್ತು ಆವರಣವನ್ನು ಶಿಬಿರದ ಆರಂಭಕ್ಕೂ ಮುನ್ನ ಮಹಿಳಾ ಸರ್ಕಾರಿ ಕಾಲೇಜು ಮದ್ದೂರು, ಎಚ್ ಕೆ ವೀರಣ್ಣಗೌಡ ಕಾಲೇಜು ಹಾಗು ಕೊಪ್ಪ ಕಾಲೇಜಿನ ನೂರು ಮಂದಿ ಸ್ವಯಂಸೇವಕ ಸೇವಕಿಯರು ಸಂಪೂರ್ಣವಾಗಿ ಸ್ವಚ್ಛಗೊಳಿಸಿ ಶಿಬಿರಕ್ಕೆ ಬೇಕಾದ ಅಡುಗೆಮನೆ ,ಸಲಕರಣೆ ಸಾಮಾನುಗಳನ್ನು ಇಟ್ಟುಕೊಳ್ಳಲು ಕೊಠಡಿಗಳನ್ನು ಶುಚಿಗೊಳಿಸಿ ಸಿದ್ಧಪಡಿಸಿಕೊಳ್ಳಲಾಯಿತು. ಹಾಗೆ ಉಳಿದಂತೆ ಶಾಲಾ ಅವರಣದ ಉಳಿದ ಭಾಗವನ್ನು ಶಿಬಿರದ ಹಿಂದಿನ ದಿನ ಅಂದರೆ 11ನೇ ತಾರೀಕು ಸಂಜೆ ಶಿಬಿರಕ್ಕೆ ಆಗಮಿಸಿದ್ದ ವಿವಿಧ ಕಾಲೇಜಿನ 100 ಮಂದಿ ಶಿಬಿರಾರ್ಥಿಗಳು ಬೆಳಗಿನ ಜಾವದಿಂದ ಮಧ್ಯಾಹ್ನದವರೆಗೆ ಇಡೀ ಆವರಣ ಹಾಗೂ ಪ್ರತಿನಿತ್ಯದ ಕಾರ್ಯಕ್ರಮಕ್ಕೆ ಬೇಕಾದ ವೇದಿಕೆಯನ್ನು ಸುಸಜ್ಜಿತಗೊಳಿಸಿಕೊಂಡು ಅವಿಸ್ಮರಣೀಯವಾದ ಶ್ರಮದಾನವನ್ನ ಮಾಡಿದರು.

ಶಿಬಿರದ ಪ್ರತಿದಿನವೂ ಶಿಬಿರಾರ್ಥಿಗಳಿಗೆ ಶ್ರಮದ ಪ್ರಾಮುಖ್ಯತೆಯ ಅರಿವು ಮೂಡಿಸಲು ಕ್ರಿಯಾಯೋಜನೆ ರೂಪಿಸಿ ಗ್ರಾಮಸ್ಥರ ಸಲಹೆ ಮೇರೆಗೆ ಗ್ರಾಮದ ಸಾರ್ವಜನಿಕ ಸ್ಥಳಗಳನ್ನು ಆಯ್ಕೆ ಮಾಡಿಕೊಂಡು ಗ್ರಾಮಸ್ಥರು ಹಾಗೂ ಪಂಚಾಯತಿಯವರ ಸಹಕಾರದೊಂದಿಗೆ ಈ ಗ್ರಾಮದಲ್ಲಿ ಒಂದು ಅದ್ಭುತವಾದ, ಸದಾಕಾಲ ಸ್ಮರಣೆಯಲ್ಲಿ ಉಳಿಯುವಂತಹ, ಯುವಶಕ್ತಿ ಮನಸ್ಸು ಮಾಡಿದರೆ ಏನೆಲ್ಲವೂ ಸಾಧ್ಯ ಎಂಬುದಕ್ಕೆ ತುಂಬಾ ಹಳೆಯದಾದ ಕಲ್ಯಾಣಿಯನ್ನು ನವೀಕರಣಗೊಳಿಸಿದ್ದು. ಐನೂರು ವರ್ಷಗಳಿಗೂ ಹಳೆಯದಾದ ಗ್ರಾಮದ ಬೋರೇದೇವರ ದೇವಾಲಯಕ್ಕೆ ಸೇರಿದ ಚೌಕಿ ಕೊಳವೆಂಬ ಕಲ್ಯಾಣಿ ಎತ್ತರದ ಗಿಡ ಗಂಟೆಗಳಿಂದ ತುಂಬಿಹೋಗಿ ಕಲ್ಯಾಣಿ ಚಹರೆಯೇ ಇಲ್ಲದಷ್ಟು ಮುಚ್ಚಿಹೋಗಿತ್ತು. ಕಲ್ಯಾಣಿಯಲ್ಲಿ ತುಂಬಿದ ನೀರು ಹೂಳಿನಿಂದ ತುಂಬಿಕೊಂಡು ಜಲಚರಗಳು ಜೀವಿಸಲು ಹಾಗೂ ಪ್ರಾಣಿಗಳಿಗೆ ಕುಡಿಯಲು ಕಲುಷಿತವಾಗಿತ್ತು. ಶಿಬಿರಾರ್ಥಿಗಳು ಮತ್ತು ಗ್ರಾಮಸ್ಥರು ಸೇರಿ ಕಲ್ಯಾಣಿಯ ಆವರಣದ ರಾಶಿ ರಾಶಿ ಗಿಡಗಳನ್ನೆಲ್ಲ ತೆಗೆದು ಹೊರ ಆವರಣವನ್ನು ಶುಚಿಗೊಳಿಸಿ ಕಲ್ಯಾಣಿ ಪ್ರವೇಶಿಸುವ ರಸ್ತೆ ನಿರ್ಮಿಸಿ ಹೂಳಿನಿಂದ ತುಂಬಿ ಹೋಗಿದ್ದ ಕೊಳದಲ್ಲಿ ಹಳೆಯ ನೀರರನ್ನೆಲ್ಲ ತೆಗೆದು ಹೂಳೆತ್ತಿ ಸಂಪೂರ್ಣ ಸ್ವಚ್ಛಗೊಳಿಸಿ ಕಲ್ಲಿನ ಹಂತಗಳಿಗೆ ಸುಣ್ಣ ಬಣ್ಣ ಬಳಿದು ಸ್ವಚ್ಛ ಸುಂದರ ತಾಣವಾಗಿ ನಿರ್ಮಿಸಿದ್ದು ಅವಿಸ್ಮರಣೀಯವಾದ ಚಟುವಟಿಕೆ. ಇದರ ಜೊತೆಗೆ ದೇವಾಲಯ ಹಾಗೂ ಅದರ ಹೊರಾವರಣ ಆವರಣದಲ್ಲಿನ ಗಿಡ ಕಳೆ ತೆಗೆದು ಪ್ಲಾಸ್ಟಿಕ್ ಮುಕ್ತಗೊಳಿಸಿದರು ಹಾಗೂ ಬೆಸಗರಹಳ್ಳಿಯ ಸರ್ಕಾರಿ ಆಸ್ಪತ್ರೆ ಆವರಣದ ಕಳೆ ಗಿಡಗಳು, ಕಸ ,ಪ್ಲಾಸ್ಟಿಕ್ ಪೇಪರ್ ಹಾಯ್ದು ಸಂಪೂರ್ಣ ಸ್ವಚ್ಛಗೊಳಿಸಲಾಯಿತು. ಗ್ರಾಮದ ಪ್ರಮುಖ ಬೀದಿಗಳ ಅಕ್ಕಪಕ್ಕ ಸ್ವಚ್ಛಗೊಳಿಸಲಾಯಿತು.

ಶಿಬಿರದ ವಿಶೇಷತೆಗಳಲ್ಲಿ ಮತ್ತೊಂದು ಪ್ರಮುಖವಾದದ್ದು ಶಿಬಿರಗಳ ಉದ್ದೇಶಗಳಲ್ಲಿ ಒಂದಾದ ಸಾರ್ವಜನಿಕ ಕಟ್ಟಡಗಳಿಗೆ ಸುಣ್ಣಬಣ್ಣ ಬಳಿದು ಆಕರ್ಷಕಗೊಳಿಸುವ ಕಾರ್ಯ. 'ಸಮರ್ಪಣ' ಎಂಬ ಸ್ವಯಂಸೇವಕರ ತಂಡ ಈಗಾಗಲೇ ರಾಜ್ಯಾದ್ಯಂತ 80 ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಸ್ವಚ್ಛತೆ ಹಾಗೂ ಬಣ್ಣ ಲೇಪನ ಮಾಡಿ ಜಾಗೃತಿ ಮೂಡಿಸುವ, ವಿವಿಧ ಚಿತ್ತಾರಗಳಿಂದ ಶಾಲೆಯ ಕಾಂಪೌಂಡ್, ಸರ್ಕಾರಿ ಕಟ್ಟಡಗಳ ಗೋಡೆ ಮೊದಲಾದವುಗಳನ್ನು

ಅಲಂಕರಿಸಿ ತಮ್ಮ ಕೌಶಲ್ಯವನ್ನು ಹಾಗೂ ಸೇವಾ ಮನೋಭಾವನೆಯನ್ನು ಮೆರೆದಿರುವ ಸಚಿನ್ ಮತ್ತು ತಂಡದ ಸ್ವಯಂ ಸೇವಕ ಸೇವಕಿಯರು ಮಹರ್ನವಮಿ ದೊಡ್ಡಿ ಗ್ರಾಮದ ಶಿಬಿರ ಆಯೋಜನೆ ಮಾಡಿಕೊಂಡಿದ್ದ ಅತ್ಯಂತ ಹಳೆಯದಾದ ಶಾಲೆಯ ಮಾಸಲಾಗಿದ್ದ ಕಾಂಪೌಂಡ್ ಗೋಡೆಗಳನ್ನು ಸುಣ್ಣ ಬಣ್ಣಗಳಿಂದ ಅಲಂಕರಿಸಿ ಪರಿಸರ ,ಶಿಕ್ಷಣ, ಮಾದಕ ವ್ಯಸನ ಮೊದಲಾದವುಗಳ ಜಾಗೃತಿ ಮೂಡಿಸುವ ವಿವಿಧ ಚಿತ್ರಗಳನ್ನು ತಮ್ಮ ಕೌಶಲ್ಯಗಳ ಮೂಲಕ ರಚಿಸಿ ಇಡೀ ಶಾಲೆ, ಅಂಗನವಾಡಿ ಕೇಂದ್ರ ಹಾಲಿನ ಉತ್ಪಾದಕರ ಸಂಘದ ಗೋಡೆಗಳನ್ನು ಸುಂದರವಾಗಿ ಅಲಂಕರಿಸಿ ಮಾದರಿ ಶಾಲೆಯಂತೆ ಹೊಸ ರೂಪ ಕೊಟ್ಟು ಆಕರ್ಷಕಗೊಳಿಸಿದ್ದು ಅಭೂತಪೂರ್ವವಾದ, ಸ್ಮರಣೀಯವಾದ ಸೇವೆ. ಹೂಳೆತ್ತಿ ಸ್ವಚ್ಛಗೊಳಿಸಿದ ಕಲ್ಯಾಣಿಯ ಸುತ್ತಲಿನ ನೂರಾರು ಕಲ್ಲಿನ ಹಂತಗಳಿಗೆ ಸುಣ್ಣ ಬಣ್ಣ ಲೇಪನ ಮಾಡಿ ಸುಂದರಗೊಳಿಸಿದರು .ಸರ್ಕಾರಿ ಶಾಲೆಯ ಆವರಣದ ಗಿಡಗಳಿಗೆ ಶಿಬಿರಾರ್ಥಿಗಳು ಸೇರಿ ಪಾತಿ ಮಾಡಿ ಸುತ್ತಲೂ ಇಟ್ಟಿಗೆ ಜೋಡಿಸಿ ಸುಣ್ಣ ಬಳಿದು ರಕ್ಷಾ ಕವಚ ನಿರ್ಮಿಸಿ ಆಕರ್ಷಕ ಗೊಳಿಸಿದರು.

ಶಿಬಿರದ ಮತ್ತೊಂದು ಆಕರ್ಷಣೀಯ ನೋಟ ಗಾಂಧೀಜಿ ಮತ್ತು ಕಸ್ತೂರಬಾ ಜೀವನದಾರಿತ ಹಾಗೂ ಯಶೋದರಮ್ಮ ದಾಸಪ್ಪ ಮೊದಲಾದ ಸ್ಮರಣೀಯ ವ್ಯಕ್ತಿಗಳ ಹಾಗೂ ಅವರ ಸಂದೇಶಗಳನ್ನು ಸಾರುವ 150ಕ್ಕೂ ಹೆಚ್ಚು ಛಾಯಾಚಿತ್ರಗಳ ನಾಮಫಲಕಗಳ ವಸ್ತು ಪ್ರದರ್ಶನ. ಶಿಬಿರಾರ್ಥಿಗಳು ಬಂದಂತಹ ಅತಿಥಿಗಳು ಹಾಗೂ ಗ್ರಾಮಸ್ಥರೆಲ್ಲರಿಗೂ ಕೂಡ ಮೆಚ್ಚುಗೆಗೆ ಪಾತ್ರವಾದವು. ದೊಡ್ಡವರ ಮಾತುಗಳು ಹೇಗೆ ಪ್ರೇರಣೆಯನ್ನು ಬಾಳಿಗೆ ಒದಗಿಸಬಲ್ಲವೋ ಚಿತ್ರಗಳು ಕೂಡ ಸದಾ ಮಾತನಾಡುತ್ತವೆ. ಎಂಬುದಕ್ಕೆ ಶಿಬಿರದಲ್ಲಿ ಪ್ರದರ್ಶಗೊಂಡಿದ್ದ ಚಿತ್ರಗಳು ಮತ್ತು ಸಂದೇಶಗಳು ಅಪರೂಪದ ನೋಟಗಳಾಗಿ ಎಲ್ಲರನ್ನು ಚಿತ್ತಾಕರ್ಷಕ ಗೊಳಿಸಿದವು .

ಶಿಬಿರದ ಮತ್ತೊಂದು ಉದ್ದೇಶಿತ ಯೋಜನೆ ಕಂದಾಯ ಅದಾಲತ್. ಕಂದಾಯ ಇಲಾಖೆಗೆ ಒಳಪಡುವ ಗ್ರಾಮಸ್ಥರ ಜಮೀನಿಗೆ ಸಂಬಂಧಿಸಿದ ಖಾತೆ, ಪಹಣಿ, ವಂಶವೃಕ್ಷ ಮೊದಲಾದ ಸಮಸ್ಯೆಗಳ ಪರಿಹಾರ ಹಾಗೂ ಸಾಮಾಜಿಕ ಭದ್ರತಾ ಯೋಜನೆಯ ವಿವಿಧ ಪಿಂಚಣಿ ಸೌಲಭ್ಯಗಳನ್ನು ಕಲ್ಪಿಸಿಕೊಡುವ ನಿಟ್ಟಿನಲ್ಲಿ ಮಾನ್ಯ ಅಪರ ಜಿಲ್ಲಾಧಿಕಾರಿಗಳಾದ ಡಾ. ಎಚ್ ಎಲ್ ನಾಗರಾಜ್ ಹಾಗೂ ತಹಶೀಲ್ದಾರ್, ಶಿರಸ್ತೇದಾರ್, ಗ್ರಾಮ ಲೆಕ್ಕಾಧಿಕಾರಿ ಮೊದಲಾದ ಅಧಿಕಾರಿಗಳ ಸಮೂಹ ಗ್ರಾಮಕ್ಕೆ ಆಗಮಿಸಿ ಶಿಬಿರಾರ್ಥಿಗಳು ಪ್ರತಿ ಮನೆಯ ಸರ್ವೆ ಮಾಡಿ ಪಡೆದುಕೊಂಡು ಬಂದಿದ್ದ 60ಕ್ಕೂ ಹೆಚ್ಚು ಅಹವಾಲುಗಳನ್ನು ಪಡೆದು ಅವುಗಳನ್ನು ಶೀಘ್ರದಲ್ಲಿ ಇತ್ಯರ್ಥಗೊಳಿಸಿಕೊಡುವ ಭರವಸೆ ನೀಡಿದರು .

ಉಳಿದಂತೆ ಎಲ್ಲಾ ಶಿಬಿರಗಳ ಕ್ರಿಯಾಯೋಜನೆಯಂತೆ ಬೆಳಗಿನ ಧ್ವಜಾರೋಹಣ, ಚಿಂತನ ಮಂಥನ ಶಿಬಿರವಾಣಿ ವಾಚನ, ಗ್ರಾಮದ ಪ್ರಮುಖ ಬೀದಿಗಳಲ್ಲಿ ಜಾಥಾ ಕಾರ್ಯಕ್ರಮ, ವಿದ್ಯಾರ್ಥಿಗಳಿಗೆ ವಿವಿಧ ಸಾಂಸ್ಕೃತಿಕ ಸ್ಪರ್ಧೆಗಳು, ಸಂಜೆಯ ಸಾಂಸ್ಕೃತಿಕ ಕಾರ್ಯಕ್ರಮಗಳು ವಿದ್ಯಾರ್ಥಿಗಳಲ್ಲಿ ಶಿಸ್ತು, ಸಮಯಪ್ರಜ್ಞೆ, ವೇದಿಕೆ ನಿರ್ವಹಣೆ, ನಾಯಕತ್ವ ಗುಣ, ಜವಾಬ್ದಾರಿ ನಿರ್ವಹಣೆ, ಮಾತನಾಡುವ ಹಾಗೂ ಬರವಣಿಗೆ ಮಾಡುವ ಕೌಶಲ್ಯ, ವೇದಿಕೆಗಳನ್ನು ನಿರ್ವಹಣೆ ಮಾಡುವ ಜವಾಬ್ದಾರಿಗಳನ್ನು ಈ ಎಲ್ಲಾ ಕ್ರಿಯೆಗಳಿಂದ ಅರಿತುಕೊಳ್ಳಲು ಶಿಬಿರ ಪ್ರೇರಣೆಯಾಯಿತು.

ಪ್ರತಿನಿತ್ಯ ವಿದ್ಯಾರ್ಥಿಗಳು ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಮಧ್ಯಪಾನ, ದೂಮಪಾನ ,ಭ್ರಷ್ಟಾಚಾರ, ಮಹಿಳಾ ಸಬಲೀಕರಣ ಮೊದಲಾದ ಜಾಗೃತಿ ಕಿರು ನಾಟಕಗಳು, ಗೀತೆಗಳು, ನೃತ್ಯಗಳನ್ನು ಪ್ರದರ್ಶಿಸಿ ಗ್ರಾಮಸ್ಥರಲ್ಲಿ ಅರಿವು ಮೂಡಿಸಿದರು .ಇದಲ್ಲದೆ ಮೈಸೂರಿನ ಲಿಂಗರಾಜು ಮತ್ತು ತಂಡ, ಸಿದ್ದಪ್ಪ ಮತ್ತು ತಂಡ ಅಂತಾರಾಷ್ಟ್ರೀಯ ಖ್ಯಾತಿಯ ಅಪ್ಪಗೆರೆ ತಿಮ್ಮರಾಜು, ಹುರಗಲವಾಡಿ ರಾಮಯ್ಯ ಮಂಜುಳಾ ಆಲದಹಳ್ಳಿ ಮೊದಲಾದ ಜನಪ್ರಿಯ ಗಾಯಕರುಗಳು ಜನಪದ ಗಾಯನದ ಮೂಲಕ ಸಾಹಿತ್ಯ ಸಂಗೀತದ ಬಗ್ಗೆ ಜಾಗೃತಿ ಮೂಡಿಸಿ ಆ ಬಗೆಗೆ ಎಲ್ಲರ ಮೆಚ್ಚುಗೆಗೆ ಪಾತ್ರರಾದರು. ಪ್ರತಿನಿತ್ಯ ಪ್ರಾರ್ಥನೆ, ವ್ಯಾಯಾಮ , ಪ್ರಚಾರ ಗ್ರಾಮಸ್ಥರ ಸ್ನೇಹ ಮಿಲನ ಶಿಬಿರಾರ್ಥಿಗಳ ಬಾಂಧವ್ಯ ವೃದ್ಧಿ ಸೇರಿದಂತೆ ಪ್ರತಿದಿನವೂ ಕ್ರಿಯಾತ್ಮಕವಾಗಿ ಆರಂಭಗೊಂಡು ರಾತ್ರಿವರೆಗೂ ಚೈತನ್ಯ ಶಾಲಿಗಳಾಗಿ ಶಿಬಿರಾರ್ಥಿಗಳನ್ನೆಲ್ಲ ಒಂದಲ್ಲ ಒಂದು ಕ್ರಿಯೆ ,ಕಲಿಕೆಗಳಲ್ಲಿ ತೊಡಗಿಸುವಂತಹ ಕ್ರಿಯಾಯೋಜನೆ ಮೂಲಕ ಶಿಬಿರ ನಿರ್ದಿಷ್ಟ ಗುರಿಯನ್ನು ತಲುಪಿದ ಸಾರ್ಥಕತೆಯನ್ನು ಹೊಂದಿದೆ.

ಮದ್ದೂರು ಮಹಿಳಾ ಸರ್ಕಾರಿ ಕಾಲೇಜಿನ ಪ್ರಾಂಶುಪಾಲರಾದ ಪ್ರೊ.ಕೆ ಬಿ ನಾರಾಯಣ ಅವರು ಶಿಬಿರದ ನಿರ್ದೇಶಕರಾಗಿ ಜವಾಬ್ದಾರಿಯನ್ನು ವಹಿಸಿಕೊಂಡಿದ್ದರು. ಅವರು ತಮ್ಮ ಅನುಭವ ಮತ್ತು ಮಾರ್ಗದರ್ಶನದ ಮೂಲಕ ಆಯ್ದ 10 ಕಾಲೇಜಿನ 180 ಶಿಬಿರಾರ್ಥಿಗಳನ್ನು ಆಯ್ಕೆ ಮಾಡಿಕೊಂಡು ಶಿಬಿರವನ್ನು ಆ ಯೋಜನೆ ಮಾಡಿದ್ದರು . ಇದರ ಜವಾಬ್ದಾರಿ ನಿರ್ವಹಣೆಗಾಗಿ ಆಯ್ದ ಕಾರ್ಯಕ್ರಮ ಅಧಿಕಾರಿಗಳಾದ ಮಂಡ್ಯ ಮಹಿಳಾ ಕಾಲೇಜಿನ ಡಾ..ಎಂ ಕೆಂಪಮ್ಮ ಮದ್ದೂರು ಮಹಿಳಾ ಕಾಲೇಜಿನ ಡಾ. ನಮ್ರತ ಜಿ.ಆರ್ , ವೆಂಕಟೇಶ್ , ಮೈಸೂರಿನ ಶೇಷಾದ್ರಿಪುರಂ ಕಾಲೇಜಿನ ಡಾ. ರಾಘವೇಂದ್ರ , ಮೈಸೂರಿನ ಮಹಾರಾಜ ಸಂಜೆ ಕಾಲೇಜಿನ ಡಾ. ಲಿಂಗರಾಜು , ಮೇಲುಕೋಟೆ ಕಾಲೇಜಿನ ಕೃಷ್ಣ , ಎಚ್.ಕೆ.ವಿ ಕಾಲೇಜಿನ ಮೋಹನ್ ಈ ಕಾರ್ಯಕ್ರಮ ಅಧಿಕಾರಿಗಳನ್ನು ಶಿಭಿರಾಧಿಕಾರಿಗಳಾಗಿ ನೇಮಿಸಿಕೊಂಡು ಅವರೆಲ್ಲರ ಉತ್ತಮ ಕಾರ್ಯ ನಿರ್ವಹಣೆ ಮೂಲಕ ಶಿಬಿರವನ್ನು ಯಶಸ್ವಿಯಾಗಿ ಮುಕ್ತಾಯಗೊಳಿಸಲಾಯಿತು.

**'ಗ್ರಾಮದ ಸ್ಪರ್ಶವಿಲ್ಲದೆ ಬದುಕು ಪರಿಪೂರ್ಣವಲ್ಲ",**

" ಆತ್ಮ ಉಳಿಯಬೇಕಾದರೆ ಅಹಂಕಾರ ಅಳಿಯಬೇಕು ಅಹಂಕಾರ ಮನುಷ್ಯನನ್ನು ಸಂಪೂರ್ಣವಾಗಿ ಕೊಂದು ಹಾಕುತ್ತದೆ .ಇದರ ಸತ್ಯವನ್ನು ಎಂದೆಂದಿಗೂ ಎಲ್ಲರಲ್ಲಿಯೂ ಕಂಡುಕೊಳ್ಳಬಹುದು. ಅಹಂಕಾರದ ಕತ್ತಲೆಯನ್ನು ಕಳೆಯಬೇಕಾದರೆ ನಮ್ರತೆಯ ಬೆಳಕು ಬೇಕು "– ಎಂಬ ಗಾಂಧೀಜಿಯವರ ಮಹಾವಾಣಿಗಳಂತೆ ಈ ಎ□□□□□□ಸ್ ಶಿಬಿರ ನಮ್ಮಲ್ಲಿ ಹಾಗೂ ವಿದ್ಯಾರ್ಥಿಗಳ ನಡೆ–ನುಡಿಯಲ್ಲಿ ಒಂದಷ್ಟು ಬದಲಾವಣೆ ತರುವಲ್ಲಿ ಪ್ರೇರಣೆ ಒದಗಿಸಿ ಮುಂದಿನ ಉದಾತ್ತ ಗುರಿ, ಉದ್ದೇಶದಡೆಗೆ ಕೊಂಡುಹೋಗುವಲ್ಲಿ ಸಫಲವಾಗಿದೆ .

**– ಡಾ ಎಂ. ಕೆಂಪಮ್ಮ**
ಸಹ ಪ್ರಾಧ್ಯಾಪಕರು, ಮಹಿಳಾ ಸರ್ಕಾರಿ ಕಾಲೇಜು ಮಂಡ್ಯ

■

# 120 YEARS OF PHOENIX ASHRAM



*Gandhiji' s home at phoenix ashram*

This year marks the 120th anniversary of Phoenix Settlement, which Mahatma Gandhi founded in 1904 near Durban in South Africa. It is the first of the four ashrams he established in his life, the others being Tolstoy Farm near Johannesburg (1910), Sabarmati Ashram near Ahmedabad (1915), and Sevagram Ashram near Wardha (1936).

The twenty-one years Gandhiji spent in South Africa set the stage for all that he did in the subsequent three decades as the leader of India's freedom movement. In the famous words of Nelson Mandela, ""You gave us Mohandas Gandhi; we returned him to you as Mahatma Gandhi." Phoenix Ashram played a pivotal role in this transformation.

Gandhiji purchased 100 acres of land in Phoenix on the outskirts of Durban. He began his first experiment in communal living here. This commune provided him the platform to continue, and intensify, his other 'Experiments with Truth' — nonviolence, non-possession, simple and frugal living, egalitarianism, self-reliance, interfaith harmony, removal of untouchability, sanitation and (outer and inner) cleanliness, environmental protection, respect for manual labour, a new type of holistic education and, above all, oneness of humanity without any discrimination.

Phoenix is where Gandhiji began his journey of transforming himself from a successful lawyer into a simple and selfless worker determined to live a life of spirituality rooted in fight against injustice and service of humanity. It was during Gandhiji's Phoenix years that he pioneered his practice of Satyagraha and advocacy of Sarvodaya. Phoenix is also where he started his first newspaper Indian Opinion.

Phoenix Ashram thus became the first laboratory

where Gandhiji, in committed partnership with Kasturba, rigorously tested the principles that later defined the guiding philosophy of his life. That philosophy has imperishable and universal relevance for humanity because it derives its sustenance from Satya (Truth) and Ahimsa (Nonviolence), which, as Gandhiji emphatically stated, are inter-changeable attributes of God.

Mahatma Gandhi's life, as also the lives and teachings of all other great Teachers of Humanity, is a perennial source of ideas and inspiration for a better world. Today India and the rest of the world are beset with huge challenges — growing inequality in wealth and power; continued apathy toward the suffering of the poor and the marginalised; unbalanced development that gives primacy to consumerism over holistic human progress; environmental degradation that has reached the level of a planetary crisis; disharmony and conflicts in society over caste, creed and race; denial of equality and dignity to women; growing militarism and warmongering by strong nations threatening weak ones; continuing stockpiling of nuclear and other weapons of mass destruction; and a deeply iniquitous world order in which a majority of the human population has little say in reforming global affairs. These challenges cannot be overcome, either within India or globally, without being guided by the life and legacy of Gandhiji and other great savants of humanity.

As such, commemoration of the 120th anniversary of the founding of Phoenix Ashram provides all of us an occasion to rededicate ourselves to Gandhian principles and ideals, whose promotion is necessary



*The printing press and building of 'Indian Opinion' Newspaper*



*Karnataka Gandhi Bhavan members at phoenix settlement with Ila Gandhi ..*

to build a better future for all. It is an occasion for us to engage in a constructive dialogue with students, youth and other influential sections of society who are either unaware of the major milestones in Gandhiji's life or are influenced by negative and malicious propaganda about him. No less important, it is also an occasion for all of us to honestly introspect about the problems and shortcomings within Gandhian organisations, and take necessary corrective steps to work with renewed unity, vigour and commitment.

The Phoenix Settlement Trust in Durban under the leadership of Elaben Gandhi (Mahatma's granddaughter) has taken the initiative to commemorate the 120th anniversary of the Ashram with an ambitious five-year plan. In the first week of February, some Gandhian activists in India held an online meeting with Elaben and her colleagues in South Africa. Our discussion yielded an idea that commemorative activities should also be held in India and around the world in 2024 and beyond. As a curtain-raiser to these activities, it has been proposed to organise a large conference in the national capital in the first half of 2024 (after the parliamentary elections), followed by a series of activities in different parts of the country.

To plan and organise commemorative activities in India in a befitting manner, it is proposed to form a committee comprising Gandhian and other progressive organisations/individuals. ■



## ಕಲಿಯುಗದ ಬುದ್ಧ ಗಾಂಧಿ

– ಕುವೆಂಪು.

**ಗೌತಮ ಬುದ್ಧ :** ಸುಮಾರು ಎರಡು ಸಾವಿರ ವರ್ಷಗಳ ಹಿಂದೆ ಸಿದ್ದಾರ್ಥ ಬಾಲಕನಾಗಿದ್ದಾಗ ತನ್ನ ತಂದೆಯ ಕೃಷಿಕ್ಷೇತ್ರಕ್ಕೆ ಹೋಗಿ ಅಲ್ಲಿ ಬಿಸಿಲಿನಲ್ಲಿ ದುಡಿಯುವ, ಬಿತ್ತುವ, ಬದುವು ಹಾಕುವ ಕೆಲಸಗಾರರನ್ನು ನೋಡಿ ತುಂಬಾ ವ್ಯಥೆ ಪಟ್ಟನು.

"ಒಬ್ಬ ಮನುಷ್ಯ ಇನ್ನೊಬ್ಬ ಮನುಷ್ಯನನ್ನು ಶೋಷಿಸುವುದು ಎಷ್ಟು ಸರಿ ?" ಎಂದು ಕೇಳಿ ಸ್ವತಃ ತಾನೇ ಭೂಮಿಯನ್ನು ಉಳುಮೆ ಮಾಡಿದನು. ಬೇಟೆಗೆ ಕರೆದಾಗ "ಆ ಮುಗ್ಧ ಪ್ರಾಣಿಗಳನ್ನು ಕೊಲ್ಲುವುದನ್ನು ನಾನು ನೋಡಲಾರೆ" ಎಂದು ಬೇಟೆಯನ್ನು ತ್ಯಜಿಸಿದನು. ಪ್ರಜಾಪತಿ ಗೌತಮಿ "ನಾವು ಕ್ಷತ್ರಿಯರು ಬೇಟೆಯಾಡುವುದು, ಯುದ್ಧ ಮಾಡುವುದು ನಮ್ಮ ಕರ್ತವ್ಯ" ಎಂದು ಹೇಳಿದಾಗ, "ಮನುಷ್ಯ ಮನುಷ್ಯನನ್ನು ಕೊಲ್ಲುವುದು ಕರ್ತವ್ಯ ಹೇಗಾಗುತ್ತದೆ ? ಕ್ಷತ್ರಿಯರೆಲ್ಲಾ ಪರಸ್ಪರ ಪ್ರೀತಿಯಿಂದ ಜೀವಿಸಿದರೆ ಹಿಂಸೆಯೂ ಇಲ್ಲದೇ ಬದುಕಬಹುದು" ಎಂದು ಉತ್ತರಿಸಿದನು.

**ಮಹಾತ್ಮ ಗಾಂಧಿ :** ಇದೇ ರೀತಿ ಮೋಹನ್ ದಾಸ್ ಎಂಬ ಬಾಲಕನು ಬಾಲ್ಯದಲ್ಲಿದ್ದಾಗ ಮನೆ ಕೆಲಸದ ಹುಡುಗ ಊಕಾನ ಕುರಿತು ಯೋಚಿಸಿದ್ದನು. ಅವನನ್ನು ಮುಟ್ಟಿ ತಾಯಿಯ ಕೋಪಕ್ಕೆ ಗುರಿಯಾಗಿದ್ದನು. ದಕ್ಷಿಣ ಆಫ್ರಿಕಾದಲ್ಲಿ ನಿಗ್ರೋ ವ್ಯಕ್ತಿಗಳನ್ನು ಮನೆಗೆ ಸೇರಿಸಿಕೊಳ್ಳಲು ಒಪ್ಪದ ಹೆಂಡತಿಯ ಮೇಲೆ ಸಿಟ್ಟಾಗಿ ಅವಳನ್ನು ಹೊರಹಾಕಲು ತಯಾರಾಗಿದ್ದನು. ದೊಡ್ಡ ಪ್ರಮಾಣ ವಿರೋಧದ ನಡುವೆಯೂ ಶತಮಾನದ ಹಿಂದೆಯೇ ಅಸ್ಪೃಶ್ಯ ದಂಪತಿಗಳನ್ನು ಆಶ್ರಮಕ್ಕೆ ಸೇರಿಸಿಕೊಂಡು ಅವರ ಮಗಳು ಲಕ್ಷ್ಮೀಯನ್ನು ದತ್ತು ಪಡೆದನು. ಸ್ವತಃ ತಾನೇ ಅಸ್ಪೃಶ್ಯರು ಮಾಡುತ್ತಿದ್ದ ಜಾಡ ಮಾಲಿಗಳ ಕೆಲಸವನ್ನು ಮಾಡಿದನು. ದಕ್ಷಿಣ ಆಫ್ರಿಕಾದ ಜೈಲಿನಲ್ಲಿ ನಿಗ್ರೋ ವ್ಯಕ್ತಿಗೆ ಚೇಳು ಕಚ್ಚಿದಾಗ ಬಾಯಿಂದ ಗಾಯವನ್ನು ಹೀರಿ ವಿಷ ತೆಗೆದಿದ್ದನು. ಬಡಜನರ ಉಡುಗೆಯನ್ನು ತನ್ನ ಉಡುಗೆಯನ್ನಾಗಿ ಮಾಡಿಕೊಂಡನು. ಕೊಲ್ಲಲು ಬಂದ ವ್ಯಕ್ತಿಗಳನ್ನು ಕ್ಷಮಿಸಿ ವಾಪಸ್ ಕಳುಹಿಸಿದ್ದನು. ಯುದ್ಧ ಬೇಡ ಶಾಂತಿ ಬೇಕೆಂದು ಭಾರತದಾದ್ಯಂತ ತಿರುಗಾಡಿ ಶಾಂತಿ ಸ್ಥಾಪಿಸಿದನು. ಬಡವರ ಮಟ್ಟಕ್ಕೆ ಇಳಿದು ಅವರಂತೆ ಬದುಕಿದನು. ಕೊನೆಗೆ ತನ್ನ ಸಿದ್ಧಾಂತಗಳಿಗೆ ಬದ್ಧನಾಗಿ ಪ್ರಾಣವನ್ನು ಕೊಟ್ಟನು.

ಎರಡು ಸಾವಿರ ವರ್ಷಗಳ ಹಿಂದೆ ಇದ್ದಂತಹ ಬುದ್ಧನನ್ನು ಆರಾಧಿಸುವ ಜನರು ನೂರು ವರ್ಷಗಳ ಹಿಂದೆ ನಮ್ಮ ನಡುವೆ ಬದುಕಿ ಹೋದಂತಹ ಗಾಂಧಿಯನ್ನು ದ್ವೇಷಿಸುತ್ತಿರುವುದು ವಿಪರ್ಯಾಸ.

– ರವಿಚಂದ್ರ ಜಂಗಣ್ಣವರ.



# ಏಕಾಂಗಿ ಗಾಂಧಿ

ರಘುನಾಥ ಕೃಷ್ಣಮಾಚಾರ್ ಅವರು ಹೇಳಿದ "ಗಾಂಧಿ ಏಕಾಂಗಿ' ಎನ್ನುವುದು ಹಲವು ಅರ್ಥಗಳಲ್ಲಿ ಮಹತ್ವದ್ದು.

"ಲಿಪ್ಯತೇನಸ ಪಾಪೇನ ಪದ್ಮಪತ್ರ ಮಿವಾಂಭಸಾ" ಕೃಷ್ಣ ಭಗವದ್ಗೀತೆಯಲ್ಲಿ ಹೇಳಿದ್ದು. ಕ್ರಿಯೆಯನ್ನು ಮಾಡಿಯೂ ಕ್ರಿಯೆಗಳಿಗೆ ಅಂಟಿಗೊಳ್ಳದೆ ಇರುವುದು ಕ್ರಿಯೆಯ ಪರಿಣಾಮಗಳಿಂದ ಮುಕ್ತನಾಗಲು ಇದ್ದ ಒಂದು ವಿಧಾನ. ಈ ವ್ಯಕ್ತಿತ್ವ ಗಾಂಧಿಗಿತ್ತು.

ಸ್ವಾತಂತ್ರ್ಯ ಬಂದ ದಿನ ಮುತ್ಸದ್ಧಿ ನೆಹರು, ಪ್ರಾಮಾಣಿಕ ಲಾಲ್ ಬಹಾದ್ದೂರ್ ಶಾಸ್ತ್ರಿ, ಯೋಧ ಸರ್ದಾರ್ ಪಟೇಲ್ ಎಲ್ಲರೂ ಧ್ವಜಾರೋಹಣದ ಸಂಭ್ರಮದಲ್ಲಿದ್ದರು. ಆದರೆ ಗಾಂಧಿ ಒಬ್ಬರು ಮಾತ್ರ ಮತೀಯ ಗಲಭೆಗಳನ್ನು ನಿವಾರಿಸಲು ಕೋಲ್ಕತ್ತಾ ಮತ್ತು ನೌಖಾಲಿಯಲ್ಲಿ ಅವರ ದಾರಿಯಲ್ಲಿ ಸಾಗದಂತೆ ಮಲ ಮತ್ತು ಗಾಜಿನ ಚೂರುಗಳನ್ನು ಹಾಕಿದ್ದರೂ ಅದರ ಮೇಲೆ ಬರಿಗಾಲಿನಲ್ಲಿ ರಕ್ತ ಸುರಿಸಿಕೊಂಡು ನಡೆದು ಹೋಗುತ್ತಿದ್ದರು.

ಆ ಕಾಲಕ್ಕೆ ಗಾಂಧಿ ಭಾರತದ ಮಹಾನಾಯಕ. ಮೌಂಟ್ ಬ್ಯಾಟನ್ ಸ್ವಾತಂತ್ರ್ಯ ದಿನಾಚರಣೆಯ ಸಂಭ್ರಮಕ್ಕೆ ಸಾಕ್ಷಿಯಾಗುವಂತೆ ಕೋರಿಕೊಂಡರೂ ಅದನ್ನು ತಿರಸ್ಕರಿಸಿ ತಾನು ಸಂಕಷ್ಟದಲ್ಲಿರುವ ಜನರೊಂದಿಗೆ ಇರಬೇಕಿದೆ ಎಂದು ಹೋಗುತ್ತಾರೆ. ಇದು ಗಾಂಧಿಯ ಒಂಟಿತನ.

' ಹಿಂದ್ ಸ್ವರಾಜ್' ನಲ್ಲಿ ಸ್ವರಾಜ್ಯ ಎಂದರೆ " ನಾನು ನನ್ನ ಕೆಲಸವನ್ನು ಮಾಡುತ್ತೇನೆ ಅಷ್ಟೆ" ಎನ್ನುವುದು ಗಾಂಧಿಯ ಉತ್ತರ.

ದೇಶ ವಿಭಜನೆ ಆದ ಮೇಲೆಯೂ," ನಾನು ವೀಸಾ ಇಲ್ಲದೆಯೇ ಪಾಕಿಸ್ಥಾನಕ್ಕೆ ಹೋಗುತ್ತೇನೆ. ಅಲ್ಲಿನ ಹಿಂದೂಗಳು ಮತ್ತು ಸಿಖ್ಖರ ರಕ್ಷಣೆಗೆ ನಿಲ್ಲುತ್ತೇನೆ" ಎಂದವರು ಗಾಂಧಿ. ಹತ್ಯೆ ಆಗದೆ ಇದ್ದರೆ ಮತ್ತೆ ಇಪ್ಪತ್ತು ದಿನಗಳಲ್ಲಿ ಗಾಂಧಿ ಪಾಕಿಸ್ಥಾನಕ್ಕೆ ಹೋಗಲು ಬೇಕಾದ ಸಿದ್ಧತೆಯನ್ನು ಮಾಡಿಕೊಳ್ಳುತ್ತಿದ್ದರು. ವೀಸಾ ಇಲ್ಲದೆ ಹೋಗುತ್ತೇನೆ ಎನ್ನುವುದು ಅವರ ಆತ್ಮವಿಶ್ವಾಸವೋ , ಮುಗ್ಧತೆಯೊ ತಿಳಿಯದು. ಆದರೆ ಇಡೀ ಜಗತ್ತನ್ನು ನಿನ್ನೊಳಗೆ ನೋಡು, ನೀನು ಇಡೀ ಜಗತ್ತಿನೊಳಗಿರು ಎನ್ನುವ ಈಶಾವಾಸ್ಯ ಉಪನಿಷತ್ತನ್ನು ಅರಿತು ಆಚರಿಸಬಲ್ಲವರಿಗೆ ಮಾತ್ರ ಸಾಧ್ಯ. ಈ ಶಕ್ತಿ ಗಾಂಧಿಗೊಬ್ಬರಿಗೇ ಇದ್ದದ್ದು.

ಹರಿಲಾಲ್ ಗಾಂಧಿ ಇಸ್ಲಾಮಿಗೆ ಮತಾಂತರ ಆದದ್ದು, ಗಾಂಧಿಗೆ ಅಸಮಧಾನ ಆದದ್ದು ಇದೆಲ್ಲ ಆದ ಮೇಲೆ ಮನೆ ಬಿಟ್ಟು ಹೋದ ಹರಿಲಾಲ್ ಗಾಂಧಿ ಮತ್ತು ಕಸ್ತೂರ್ಬಾ ಒಮ್ಮೆ ರೈಲಿನಲ್ಲಿ ಹೋಗುವಾಗ ನಿಲ್ದಾಣದಲ್ಲಿ ಹರಿಲಾಲ್ ಒಂದಷ್ಟು ಕಿತ್ತಳೆ ಹಣ್ಣು ತಂದು ಕಸ್ತೂರ್ಬಾ ಅವರಿಗೆ ಕೊಡುತ್ತಾರೆ. ಗಾಂಧಿ," ನನಗಿಲ್ವ ಮಗನೇ" ಎಂದು ಕೇಳುತ್ತಾರೆ. ಅದಕ್ಕೆ ಹರಿಲಾಲ್," ನಿನಗಿಲ್ಲ. ನನ್ನ ಅಮ್ಮನಿಗೆ ಮಾತ್ರ" ಎಂದು ಹೋಗುತ್ತಾನೆ. ವ್ಯಾವಹಾರಿಕ ತಿರಸ್ಕಾರದ ನಂತರವೂ ಮಗನನ್ನು ಗಾಢವಾಗಿ ಪ್ರೀತಿಸುವ ಶಕ್ತಿ ಗಾಂಧಿಗಿತ್ತು. ಅದು ಹರಿಲಾಲ್ ಅವರಿಗೂ ಅರ್ಥವಾಗಿತ್ತು. ಗಾಂಧಿಯವರ ಶವ ದಹನಕ್ಕೆ ಹರಿಲಾಲ್ ಹೋಗುವುದಿಲ್ಲ. "ಅಪ್ಪನ ಶವ ಸಂಸ್ಕಾರಕ್ಕೆ ಹೋಗುವ ಅರ್ಹತೆ ನನಗಿಲ್ಲ. ನಾನು ಬಟ್ಟೆ ತೊಳೆಯುತ್ತೇನೆ" ಎಂದು ಹರಿಲಾಲ್ ಹೋಗಿ ತನ್ನ ತಮ್ಮನ ಮಗಳ ಬಳಿ ಬಟ್ಟೆ ಕೇಳಿ ವಾಶ್ ಮಾಡುತ್ತಿರುತ್ತಾರೆ.

ಎಲ್ಲರಿಗೂ ಗೊತ್ತಿರುವ ಹಾಗೆ ಕಸ್ತೂರ್ಬಾ ಮೇಲೆ ಗಾಂಧಿ ಸಾಕಷ್ಟು ದಬ್ಬಾಳಿಕೆ ಮಾಡಿದ್ದರು. ಆದರೆ ಕಸ್ತೂರ್ಬಾ ಮೃತರಾದಾಗ ಚಿತೆಯಲ್ಲಿ ಕಸ್ತೂರ್ಬಾ ಹೆಣ ಉರಿದು ಬೂದಿಯಾಗುವ ಆರು ಗಂಟೆಗಳ ಕಾಲವೂ ಗಾಂಧಿ ದೊಣ್ಣೆ ಊರಿಕೊಂಡು ಚಿತೆಯನ್ನೆ ನೋಡುತ್ತಾ ನಿಂತುಬಿಟ್ಟಿದ್ದರು. "ನನ್ನ ಶಕ್ತಿ ಹೊರಟು ಹೋಯಿತು" ಎಂದ ಅವರು ಆ ನಂತರ ಅನೇಕ ಬಾರಿ ತನಗೆ ಬದುಕಿದ್ದು ಸಾಕು ಎಂಬರ್ಥದ ಮಾತುಗಳನ್ನು ಆಡಿದ್ದಾರೆ. ಕುಟುಂಬದ ವ್ಯಕ್ತಿಯಾಗಿಯೂ ಗಾಂಧಿ ಅನನ್ಯರೇ. ಈ ಅನುಬಂಧವನ್ನು ಗಾಂಧಿ ಮತ್ತು ಕಸ್ತೂರ್ಬಾರ ಹೊರತು ಬೇರೆ ಯಾರೂ ಅರ್ಥೈಸಲು ಸಾಧ್ಯವಿಲ್ಲ.

ಅಸಹಕಾರ ಚಳವಳಿಯನ್ನು ಹಿಂದೆಗೆದುಕೊಂಡ ಗಾಂಧಿಯ ನಿರ್ಧಾರವನ್ನು ಯಾವ ಕಾಂಗ್ರೆಸ್ಸಿಗರೂ ಒಪ್ಪಲಿಲ್ಲ. ಏಕೆಂದರೆ ರಾಜಕೀಯವಾಗಿ ಅದು ಸಮಂಜಸ ನಿರ್ಧಾರವಾಗಿರಲಿಲ್ಲ. ಆದರೆ ಗಾಂಧಿ ಅವರ ನಂಬಿಕೆಗೆ ಬದ್ದರಾದವರಾಗಿದ್ದರು. ತನ್ನ ನಂಬಿಕೆಗೆ ಬದ್ಧನಾಗಿಯೇ ಬಾಳುವವನನ್ನು ಋಗ್ವೇದವು ಋಷಿ ಎಂದು ಕರೆಯುತ್ತದೆ. ಈ ಶಕ್ತಿಯಲ್ಲಿಯೂ ಗಾಂಧಿ ಒಂಟಿಯೇ.

ಇನ್ನೂ ಹಲವಾರು ಅರ್ಥಗಳಲ್ಲಿ ಗಾಂಧಿ ಒಂಟಿಯೇ. ಒಂಟಿ ಎಂದರೆ ಅವರ ಅಕ್ಕ ಪಕ್ಕ ಜನ ಇರಲಿಲ್ಲ ಎಂದಲ್ಲ. ಎಲ್ಲರೊಂದಿಗಿದ್ದೂ ಎಲ್ಲೂ ಕಳೆದುಹೋಗದೆ ಅನನ್ಯನಾಗಿಯೇ ಉಳಿಯುವುದನ್ನು ರಘುನಾಥರು ಏಕಾಂಗಿತನ ಎಂದು ಕರೆದಿದ್ದಾರೆ.

(ಫೇಸ್ ಬುಕ್ ಬರಹ)

■



# ಗಾಂಧೀಜಿ : ಆಗಾಖಾನ್ ಅರಮನೆಯಲ್ಲಿ ಒಂದು ಸ್ಮರಣೆ

**ಸ್ವಾ**ತಂತ್ರ್ಯ ಹೋರಾಟದ ಸಂದರ್ಭದಲ್ಲಿ 1942 ರ ಭಾರತ ಬಿಟ್ಟು ತೊಲಗಿ ಘೋಷಣೆ ಅತ್ಯಂತ ಮಹತ್ವದ ಘಟ್ಟ. ದೇಶದ ಉದ್ದಗಲಕ್ಕೂ ಪ್ರತಿಭಟನೆ , ಉಪವಾಸ ಸತ್ಯಾಗ್ರಹ ಇತ್ಯಾದಿಗಳನ್ನು ಹೋರಾಟದ ವಿವಿಧ ರೂಪಗಳನ್ನು ಪಡೆಯುತ್ತಾ ಹೋಗಿತ್ತು.ಎಲ್ಲಾ ಕಡೆ ಬಂಧನ ಸೆರೆಮನೆವಾಸ ಬಹುದೊಡ್ಡ ಪ್ರಮಾಣದಲ್ಲಿ ನಡೆದಿತ್ತು .ಇದರಿಂದ ಸಾಮಾನ್ಯ ಜನತೆ ಯಾಕೆ ಬ್ರಿಟಿಷರು ನಮ್ಮ ನೆಲವನ್ನು ಬಿಟ್ಟು ತೊಲಗಬೇಕಾಗಿದೆ ಎಂಬ ಅರಿವು ವ್ಯಾಪಕಗೊಂಡಿತ್ತು. ಇಂಥ ಸಮಯದಲ್ಲಿ ಗಾಂಧಿಯವರನ್ನು ,ಕಸ್ತೂರಬಾ ಅವರನ್ನು ಹಾಗೂ ಮಹಾದೇವ ದೇಸಾಯಿಯವರನ್ನಬಂಧಿಸಿ ಪುಣೆಯ ಆಗಾಖಾನ್ ಅರಮನೆಗೆ ಕಳಿಸುವರು.ಅಲ್ಲಿ ಗಾಂಧೀಜಿಯವರು ಇದ್ದರು ಎಂಬ ಕಾರಣದಿಂದ ಅದು ಪ್ರಸಿದ್ದಿಯಾಗಿದೆ. ಅಲ್ಲಿ ಮಹಾತ್ಮ ಗಾಂಧಿಯವರ ಸೇವಾ ಮನೋಭಾವ ಎಷ್ಟು ಗಾಢವಾದದ್ದು ಎಂಬುದು ಗೋಚರವಾಗುವ ಅನೇಕ ಸಂಗತಿಗಳು ಇಲ್ಲಿ ದಾಖಲಾಗಿವೆ. ಇದಕ್ಕೆ ಗಾಂಧಿಯವರ ಬದುಕಿನ ಬೆನ್ನೆಲುಬು ಆಗಿದ್ದ ಕಸ್ತೂರಬಾ ಅವರು ಮತ್ತು ಕಳೆದ ಎರಡೂವರೆ ದಶಕಗಳಿಗೂ ಮೇಲ್ಪಟ್ಟು ಶಿಸ್ತಿನ ಸಿಪಾಯಿಯಂತೆ ಒಟ್ಟು ಮಹಾತ್ಮರ ಚಟುವಟಿಕೆಗಳು ಅರ್ಥಪೂರ್ಣವಾಗಿ ದಾಖಲಾಗಲು ಮುಖ್ಯ ಕಾರಣ: ಮಹಾದೇವ ದೇಸಾಯಿಯವರು. ಇವರಿಲ್ಲದಿದ್ದರೆ ಇಂದು

ನಮ್ಮ ಮುಂದಿರುವ ಅಮೂಲ್ಯ ಸಂಗತಿಗಳೆಲ್ಲ ಸಿಗುತ್ತಿರಲಿಲ್ಲವೇನೋ. ಅಲ್ಲಿ ಕಸ್ತೂರಬಾ ಅವರು ಮತ್ತು ಮಹಾದೇವ ದೇಸಾಯಿಯವರು ತೀವ್ರ ಅನಾರೋಗ್ಯದ ಕಾರಣ ಹಾಸಿಗೆ ಹಿಡಿಯುವರು.ಇಂಥ ಸಂದರ್ಭದಲ್ಲಿ ಯಾರ ಆಶ್ರಯವನ್ನು ಬಯಸದೆ ಅವರಿಬ್ಬರ ಸೇವೆಯಲ್ಲಿ ತೊಡಗಿರುವ ಕ್ರಮ ಅಪೂರ್ವವಾದದ್ದು. ಇದಕ್ಕೆ ಸಂಬಂಧಿಸಿದ ಸಾಕಷ್ಟು ಭಾವಚಿತ್ರಗಳ ನೋಟ ನಮ್ಮನ್ನು ಎಷ್ಟು ವಿಷಾದಪೂರ್ಣತೆಯಿಂದ ನೋಡುತ್ತಲೇ ಇರು ಎಂಬ ಭಾವನೆ ಯನ್ನು ದಟ್ಟವಾಗಿಸುತ್ತದೆ.ಕಳೆದ ಹದಿಮೂರು ವರ್ಷಗಳ ಹಿಂದೆ ಇಡೀ ದಿವಸ ನನ್ನ ಕುಟುಂಬದ ಜೊತೆಗೂಡಿ ಅಲ್ಲಿರುವಾಗ ಬರ್ಕ್ ವೈಟ್ ಳ ಜೀವನ ಗಾಥೆಯೂ ನನ್ನ ಮನಸ್ಸಿನಲ್ಲಿ ಸುಳಿದಾಡ ತೊಡಗಿತ್ತು. ಯಾಕೆಂದರೆ ಆಕೆ ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಅತ್ಯಂತ ತಾದಾತ್ಮತೆಯಿಂದ

ಗಾಂಧೀಜಿಯವರನ್ನು ಹಿಂಬಾಲಿಸುತ್ತಲೇ ತನ್ನ ಛಾಯಾ ಪೆಟ್ಟಿಗೆಯಲ್ಲಿ ತುಂಬಿಕೊಂಡು ಇತಿಹಾಸಕ್ಕೆ ಕೊಡುಗೆಯಾಗಿ ಕೊಟ್ಟವಳು. ಅದು ಕೇವಲ ನಮಗೆ ಮಾತ್ರವಲ್ಲ ; ಜಗತ್ತಿನ ಇತಿಹಾಸ ಕುರಿತು ಅದ್ಯಯನ ಮಾಡುವವರ ಆಸ್ತಿ ಅದು. ಆ ಹುಡುಗಿ ತನ್ನ ಕುಟುಂಬವನ್ನು ಬಿಟ್ಟು ಸಾವಿರಾರು ಕಿಲೋಮೀಟರ್ ದೂರದ ಭಾರತಕ್ಕೆ ಬಂದವಳು.ಇಲ್ಲಿ ತನಗೆ ಗಟ್ಟಿ ದನಿಯಿಂದ ಆಶ್ರಯಕೊಡುವವರು ಯಾರೂ ಇಲ್ಲದಿದ್ದರೂ ಗಾಂಧೀಜಿಯವರನ್ನ ಹಿಂಬಾಲಿಸಿದವಳು. ಚಳುವಳಿಯ ಒಂದೊಂದು ಸಂದರ್ಭದ ಭಾವಚಿತ್ರವೂ ಅದಕ್ಕೆ ಪೂರಕವಾದ ಎಂತೆಂಥ ಮಾಹಿತಿಯನ್ನು ಇತಿಹಾಸದ ನೋಟಕ್ಕೆ ಕೊಟ್ಟವಳು.

ಹೀಗೆ ಗಾಂಧೀಜಿಯವರ ಒಟ್ಟು ವ್ಯಕ್ತಿತ್ವ





ಎಂತೆಂಥ ಮಹಾನ್ ವ್ಯಕ್ತಿಗಳನ್ನು ಆಕರ್ಷಿಸಿದೆ.ಪ್ರಸಿದ್ಧ ಪರಿಸರ ತಜ್ಞ ಹಾಗೂ ಗುಡ್ಡಗಾಡು ಜನರನ್ನು ಕುರಿತು ಮಾರ್ಮಿಕ ಮಾಹಿತಿಯನ್ನು ದಾಖಲಿಸಿದ ವೆರಿಯರ್ ಎಲ್ವಿನ್ ಅವರಾಗಲಿ, ತಮ್ಮ ವೈಯಕ್ತಿಕ ಬದುಕನ್ನು ತೊರೆದು ಗಾಂಧೀಜಿಯವರ ಜೊತೆ ಬದುಕು ಕಾಣಬೇಕು ಎಂದು ಬಂದ ಮೀರಾಬೆನ್ ಅಂಥವರು ಎಷ್ಟೊಂದು ಮಂದಿ. ಈ ದೃಷ್ಟಿಯಿಂದ ಆಗಾಖಾನ್ ಅರಮನೆಯ ಆ ಭಾವನಾತ್ಮಕ ಭಾವಚಿತ್ರಗಳನ್ನ ನೋಡುವಾಗ ಎಂತೆಂಥ ಸಂಗತಿಗಳು ನನ್ನ ಮನಸ್ಸಿನಲ್ಲಿ ಸುಳಿದಾಡತೊಡಗಿತು.ಇದೆಲ್ಲವನ್ನೂ ಮಾನವೀಯ ನೆಲೆಯಲ್ಲಿ ನಮ್ಮ ನಡುವಿನ ಮತೀಯವಾದಿಗಳು ಯಾಕೆ ಗ್ರಹಿಸಲು ಹೋಗುವುದಿಲ್ಲ ಅನ್ನಿಸುತ್ತದೆ. ಎರಡು ಮೂರು ಬಾರಿ ಖುಷವಂತ ಸಿಂಗ್ ಅವರ ' ಟ್ರೈನ್ ಟು ಪಾಕಿಸ್ತಾನ್ ' ಕೃತಿಯನ್ನು ಓದುವಾಗ ಎಷ್ಟು ತಲ್ಲಣಗೊಂಡಿದ್ದೆ. ಈ ಕಾರಣಕ್ಕಾಗಿಯೇ ಒಮ್ಮೆ ಖುಷವಂತ ಸಿಂಗ್ ಅವರನ್ನು ಬೆಂಗಳೂರಿನ ಕುಮಾರ ಕೃಪಾ ಅತಿಥಿ ಗೃಹದಲ್ಲಿ ಭೇಟಿಯಾಗಿದ್ದೆ. ಆಗ ಮಾರ್ಮಿಕ ಸೂಕ್ಷ್ಮ ಸನ್ನಿವೇಶಗಳನ್ನು ಸ್ವಾತಂತ್ರ್ಯ ಚಳುವಳಿ ಕುರಿತು ಹೇಳಿದರು.ಈ ವಿಷಯಕ್ಕೆ ಸಂಬಂಧಿಸಿದಂತೆ ಅವರು ಮಾತಾಡುವಾಗ ಭಾರತದ ಮುಕ್ಕಾಲು ವಾಸಿ ಮಂದಿಗೆ ನಾವು ಎಂತೆಂಥ ಸಂಕಷ್ಟಗಳ ನಡುವೆ ಸ್ವಾತಂತ್ರ್ಯವನ್ನು ಪಡೆದೆವು ಎಂಬುದು ಗೊತ್ತಿಲ್ಲ .ಅದು ಗೊತ್ತಾಗದಂತೆ ಕೆಲವು ಮತೀಯ ಶಕ್ತಿಗಳು ಅದರ ಮೇಲೆ ಕಪ್ಪುಪರದೆಯನ್ನು ವಿಭಿನ್ನ ಮಾದರಿಗಳಲ್ಲಿ ಹೊದಿಸುತ್ತಲೇ ಬರುತ್ತಿದ್ದಾರೆ. ಜೊತೆಗೆ ಅವರು ಒಂದು ಸೂಕ್ಷ್ಮ ವಿಷಯವನ್ನು ಭಾವನಾತ್ಮಕವಾಗಿ ಹೇಳಿದರು : ನಾನು ಒಂದು ವಿಧದಲ್ಲಿ ಅದೃಷ್ಟವಂತ ; ಗಾಂಧಿ ಮಹಾತ್ಮಮತ್ತು ಆ ಮಹಾನ್ ತಾಯಿ ಮದರ್ ತೆರೇಸಾ ಅವರು ಓಡಾಡಿದ ಹೆಜ್ಜೆ ಗುರುತುಗಳಲ್ಲಿ ಓಡಾಡುತ್ತಿದ್ದೇನೆ ಎಂಬುದೇ ನನ್ನ ಅದೃಷ್ಟಕ್ಕೆ ಸಾಕ್ಷಿ ಎಂದಿದ್ದರು. ಜೊತೆಗೆ ಗಾಂಧೀಜಿಯವರ ವ್ಯಕ್ತಿತ್ವವನ್ನು ನಿಜವಾದ ನೆಲೆಯಲ್ಲಿ ನಾವು ಗ್ರಹಿಸಲು ಪ್ರಯತ್ನಿಸಿಲ್ಲ. ಹಾಗೆಯೇ ನಾವು ನಮ್ಮ ಜನಸಾಮಾನ್ಯರಿಗೆ ಅರ್ಥೈಸಲು ಹೋಗಲಿಲ್ಲ. ಕೇವಲ ಗಾಂಧೀಜಿಯವರ ಹೆಸರನ್ನು ಹೇಳುವುದರಲ್ಲೇ ತೃಪ್ತಿಪಟ್ಟುಕೊಂಡೆವು ಎಂದಿದ್ದರು.




ಆ ಭಾವಚಿತ್ರಗಳನ್ನೆಲ್ಲಾ ನೋಡಿ ಹೊರಗೆ ಬಂದೆವು.ಅದರ ಪಕ್ಕದಲ್ಲಿಯೇ ನೂರು ಗಜಗಳ ದೂರದಲ್ಲಿ ಕಸ್ತೂರಬಾ ಮತ್ತು ಮಹಾದೇವ ದೇಸಾಯಿಯವರ ಸಮಾಧಿ ನೋಡಲು ಹೋದೆವು.ಅದು ಅತ್ಯಂತ ಪ್ರಶಾಂತವಾದ ಪ್ರದೇಶ. ಅಲ್ಲಿ ಎರಡು ಸಮಾಧಿಗಳು. ಅದರ ಪಕ್ಕದಲ್ಲಿಯೇ ಗಾಂಧಿಯವರ ಧ್ಯಾನಸ್ಥ ಪ್ರತಿಮೆ.ನಮಗೆ ತುಂಬಾ ದುಃಖಿತರಾಗಿ ಕೂತಂತೆ ಭಾಸವಾಗುವ ವ್ಯಥೆಯ ಪ್ರತಿಮೆ.ಆ ಪ್ರತಿಮೆಯನ್ನು ನೋಡುತ್ತಿದ್ದರೆ ; ಅವರಿಬ್ಬರ ಪಾರ್ಥಿವ ಶರೀರವನ್ನು ತೊಳೆಯುವಾಗ ಆ ಮಹಾತ್ಮನ ಮನಸ್ಥಿತಿಯನ್ನು ನಾವ್ಯಾರು ಗ್ರಹಿಸಲು ಸಾಧ್ಯವಿಲ್ಲ ಎಂದು ಯೋಚಿಸುತ್ತಾ

ಗಾಂಧೀಜಿಯವರ ಧ್ಯಾನಸ್ಥ ಪ್ರತಿಮೆಯನ್ನೇ ನೋಡುತ್ತಾ ಕೂತೆ.ಆಗ ಗಾಂಧೀಜಿಯವರ ಕುರಿತು ಜಗತ್ತಿನಾದ್ಯಂತ ಕೆಲವು ಮಹನೀಯರ ಮಾತನ್ನು ಮೆಲುಕು ಹಾಕುತ್ತಾಹೋಗಿದ್ದೆ.ಈಗಲೂ ಆ ಆಗಾಖಾನ್ ಅರಮನೆ ನೆನಪಿಗೆ ಬಂದರೆ ಅಲ್ಲಿ ಕಂಡ ಭಾವನಾತ್ಮಕ ಭಾವ ಚಿತ್ರಗಳು ಮುಖಾಮುಖಿಯಾಗುತ್ತಲೇ ಇರುತ್ತದೆ.

– ಶೂದ್ರ ಶ್ರೀನಿವಾಸ್



# ಸುಧಾಕರ ಚತುರ್ವೇದಿ

## ಸರ್ವೋದಯ ಸಾಧಕರು...

ಸುಧಾಕರ ಚತುರ್ವೇದಿ ಅವರು ವೇದತಜ್ಞರಾಗಿ, ಗಾಂಧೀಜಿಯವರ ಒಡನಾಡಿಯಾಗಿ, ಜಲಿಯನ್ ವಾಲಾಬಾಗ್ ದುರಂತದ ಪ್ರತ್ಯಕ್ಷದರ್ಶಿಗಳಾಗಿ 120ಕ್ಕೂ ಹೆಚ್ಚು ವರ್ಷ ಜೀವಿಸಿದ್ದ ಕನ್ನಡಿಗರೆಂದು ಹೇಳಲಾಗಿದೆ.

ಸುಧಾಕರ ಚತುರ್ವೇದಿ ಅವರು 1897ರ ಏಪ್ರಿಲ್ 20ರಂದು ಜನಿಸಿದರೆಂದು ಹೇಳಲಾಗಿದೆ. ಸುಧಾಕರ ತನ್ನ ಎಂಟನೇ ವಯಸ್ಸಿನಲ್ಲೇ ಅಕ್ಕ ಪದ್ಮಾವತಿ ಬಾಯಿಯವರಿಂದ ವ್ಯಾಕರಣ, ಪ್ರಾಚೀನ ಕನ್ನಡ ಸೇರಿದಂತೆ ಕನ್ನಡ ಸಾಹಿತ್ಯದ ಪೂರ್ಣ ಪರಿಚಯ ಮಾಡಿಕೊಂಡಿದ್ದರು. ದಯಾನಂದ ಸರಸ್ವತಿಯವರ ಜೀವನ ಚರಿತ್ರೆ ಬಾಲ್ಯದಲ್ಲಿಯೇ ಅವರ ಮೆಚ್ಚಿನ ಓದಾಗಿತ್ತು. ಇವರ ವ್ಯಕ್ತಿತ್ವ ನಿರ್ಮಾಣದಲ್ಲಿ ತಾಯಿ ಪುಟ್ಟಮ್ಮ ಅವರ ಪಾತ್ರವೂ ಪ್ರಮುಖವಾಗಿತ್ತು.

ಸುಧಾಕರ ಚತುರ್ವೇದಿ ಬೆಂಗಳೂರು ಚಾಮರಾಜಪೇಟೆಯಲ್ಲಿ ಪ್ರಾಥಮಿಕ ಶಿಕ್ಷಣ ಪೂರೈಸಿದರು. ಮಾಧ್ವ ಬ್ರಾಹ್ಮಣ ಸಂಪ್ರದಾಯದ ಮನೆಯಲ್ಲಿ ಬೆಳೆದ ಇವರಿಗೆ ಇಬ್ಬರು ಮುಸಲ್ಮಾನ ಸ್ನೇಹಿತರಿದ್ದರು.

1915ರಲ್ಲಿ ಸುಧಾಕರ ಅವರು ಹರಿದ್ವಾರದ ಗುರುಕುಲದಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗ ಮೊಟ್ಟಮೊದಲ ಬಾರಿಗೆ ಗಾಂಧೀಜಿ ಅವರೊಂದಿಗೆ ಭೇಟಿಯಾಗಿತ್ತು. ದಕ್ಷಿಣ ಭಾರತದವರಾದರೂ ಸುಲಲಿತವಾಗಿ ಹಿಂದಿ ಮಾತನಾಡುವುದನ್ನು ಕಂಡ ಗಾಂಧೀಜಿ ಚಕಿತರಾಗಿದ್ದರು. ಅಂದಿನಿಂದ ಬಾಪು ಜೊತೆಗಿನ ಸ್ನೇಹ ಮೊದಲುಗೊಂಡಿತು. ಕನ್ನಡದಲ್ಲಿ ಸಹಿ ಮಾಡಲು ಹಾಗೂ ಮಾತು ಅರ್ಥವಾಗುವಷ್ಟು ಕನ್ನಡ ಭಾಷೆಯನ್ನು ಗಾಂಧೀಜಿಗೆ ಕಲಿಸುವ ಪ್ರಯತ್ನ ಮಾಡಿದ್ದರಂತೆ.

ಮಹಾತ್ಮ ಗಾಂಧಿ ಅನೇಕ ಬಾರಿ ಪತ್ರ ಬರೆಯುವಾಗ ಸುಧಾಕರರನ್ನು ಜೊತೆಯಲ್ಲಿರಿಸಿಕೊಳ್ಳುತ್ತಿದ್ದರು. ಕೆಲವು ಸಹ ವೈಸ್ರಾಯ್ಗಳೊಂದಿಗೆ ನಡೆಸುವ ಪತ್ರ ವ್ಯವಹಾರಗಳ ಹೊಣೆ ಇವರೇ ವಹಿಸಿದ್ದರಂತೆ. ಗಾಂಧೀಜಿ ಹೊರತರುತ್ತಿದ್ದ ಹಿಂದಿ ಮತ್ತು ಸಂಸ್ಕೃತ ಪ್ರತಿಗಳನ್ನು ಇಂಗ್ಲಿಷ್ಗೆ ತರ್ಜುಮೆ ಮಾಡುತಿದ್ದರಂತೆ. ಹಾಗೂ ಕನ್ನಡದಲ್ಲಿ ಅಚ್ಚಾಗುತ್ತಿದ್ದ 'ಹರಿಜನ' ಪತ್ರಿಕೆಗೆ ಸುಧಾಕರ ಅವರ ಸಹೋದರ ಸಂಪಾದಕರಾಗಿದ್ದರಂತೆ.

ಸುಧಾಕರ ಚತುರ್ವೇದಿ ಅವರು ಕನ್ನಡ, ಹಿಂದಿ, ಸಂಸ್ಕೃತ, ಇಂಗ್ಲೀಷ್ ಭಾಷೆ ಸರಾಗವಾಗಿ ಮಾತನಾಡುತ್ತಿದ್ದುದರಿಂದ ಪಂಜಾಬ್, ಲಾಹೋರ್, ಪಾಟ್ನಾ, ಕೋಲ್ಕತ್ತಾಗಳಲ್ಲಿ ಭಾಷಣ ಮಾಡಿದರು. ಅಲ್ಲಿ ಶಿಷ್ಯ ವೃಂದವೇ ಸೃಷ್ಟಿಯಾಯಿತು. ಶಿಷ್ಯರಲ್ಲಿ ಯುವತಿಯೊಬ್ಬಳು ಇವರನ್ನು ಪ್ರೀತಿಸಿದ್ದಳು ಹಾಗೂ ಆಕೆಯ ತಂದೆ ತನ್ನ ಮಗಳನ್ನು ಮದುವೆಯಾಗುವಂತೆ ಕೇಳಿಕೊಂಡಿದ್ದರು. ಆದರೆ, ಸುಧಾಕರ ಚತುರ್ವೇದಿಯವರು ಸ್ವರಾಜ್ಯ ಬರುವವರೆಗೂ ತಾನು ಮದುವೆಯಾಗುವುದಿಲ್ಲ ಎಂದು ಪ್ರತಿಜ್ಞೆ ತೊಟ್ಟಿದ್ದರು. ರಾಷ್ಟ್ರ ಸ್ವತಂತ್ರವಾಗುವುದು ತಡವಾಯಿತು... ಆ ಸಮಯಕ್ಕೆ ವಯಸ್ಸು 50 ವರ್ಷ ದಾಟಿತ್ತು. 1935ರಲ್ಲಿ ಬಲೋಚಿಸ್ತಾನದಲ್ಲಿ ಭೂಕಂಪ ಸಂಭವಿಸಿದಾಗ ಅಲ್ಲಿನ ಜನರ ಸೇವೆಗೆಂದು ತೆರಳಿದ್ದ ಪ್ರೀತಿಯ ಶಿಷ್ಯೆ ಮರಳಿ ಬರಲೇ ಇಲ್ಲ. ಹೀಗೆ ಸುಧಾಕರ ಚತುರ್ವೇದಿ ಬ್ರಹ್ಮಚಾರಿಯಾಗಿಯೇ ಉಳಿದರು.

ಮಹಾಯುದ್ಧಗಳ ಸಮಯದಲ್ಲಿ ಮುದ್ರಣವಾಗಿದ್ದ ತಮ್ಮದೇ ಪದ್ಯಗಳನ್ನು ಈಜಿಪ್ಟ್‌ನಲ್ಲಿದ್ದ ಕನ್ನಡ ನಾಡಿನ ಸೈನಿಕರಿಗಾಗಿಯೇ 500 ಪ್ರತಿಗಳನ್ನು ತಲುಪಿಸಿದ್ದರು. ಭಾರತ ಸ್ವಾತಂತ್ರ್ಯದ ಸಂದರ್ಭದಲ್ಲಿ ಸುಧಾಕರ ಚತುರ್ವೇದಿ ಅವರು ಗಾಂಧೀಜಿ ಜೊತೆ ಬಂಗಾಳದಲ್ಲಿದ್ದರು. ಹಿಂದು–ಮುಸಲ್ಮಾನರ ಗಲಭೆಗಳು ಹೆಚ್ಚು

ನಡೆಯುತ್ತಿದ್ದ ಜಾಗವದು. ಅದೇ ಸಮಯದಲ್ಲಿ ಒಬ್ಬ ಮುಸಲ್ಮಾನ ವೃದ್ಧ ಇವರನ್ನು ಆರು ತಿಂಗಳು ಜೋಪಾನ ಮಾಡಿದ್ದರು. ಸ್ವಾತಂತ್ರ್ಯ ಹೋರಾಟ ಸಮಯದಲ್ಲಿ ಸುಮಾರು 31 ಬಾರಿ ಕರಾಚಿಯಿಂದ ಮೊದಲ್ಗೊಂಡು ವೆಲ್ಲೂರಿನ ವರೆಗೆ ದೇಶದ ಬಹುತೇಕ ಕಡೆ ಸೆರೆಮನೆ ವಾಸ ಅನುಭವಿಸಿದರು.

ಸುಧಾಕರ ಚತುರ್ವೇದಿ ಅವರು ಮಹಾತ್ಮ ಗಾಂಧಿ ಅವರ 'ಪೋಸ್ಟ್ ಮನ್' ಎಂದೇ ಹೆಸರಾಗಿದ್ದರು. ಅವರ ಬದುಕು ಹೋರಾಟ ಮತ್ತು ಅಲೆದಾಟಗಳ ಜೋಡಣೆ ಎಂಬಂತ್ತಿತ್ತು. 120 ಕ್ಕೂ ಹೆಚ್ಚು ವರ್ಷ ಬದುಕಿದ ಅವರ ನಿತ್ಯ ಚಟುವಟಿಕೆ ಮತ್ತು ಆಹಾರ ಪದ್ಧತಿ ಸೋಜಿಗ ಮೂಡಿಸುವಂತದ್ದಾಗಿತ್ತು. ಬೆಳಿಗ್ಗೆ ಮತ್ತು ರಾತ್ರಿ ಒಂದು ಬಾಳೆ ಹಣ್ಣು ಸೇವೆಯೇ ಅವರ ಊಟ. ಅದುವೇ ದೀರ್ಘ ಆಯುಷ್ಯದ ಗುಟ್ಟಾಗಿತ್ತಂತೆ!

'ಮತ ಪರಿವರ್ತನೆಗಿಂತ, ಮನಃ ಪರಿವರ್ತನೆ ಉತ್ತಮ' ಹಾಗೂ ಹೆಸರು, ವೇಷ–ಭೂಷಣದಲ್ಲಿ ಬದಲಾವಣೆ ಬೇಕಾಗಿಲ್ಲ, ಯಾರಲ್ಲಿ ನಿನಗೆ ನಂಬಿಕೆಯಿದೆಯೊ ಅವರನ್ನು ನೀನು ಪೂಜಿಸು ಎಂದು ಸಾರಿದರು. ಬ್ರಹ್ಮಚಾರಿಯಾಗಿದ್ದ ಸುಧಾಕರ ಅವರು ಹಿಂದುಳಿದ ವರ್ಗದ ಹುಡುಗನನ್ನು ದತ್ತು ತೆಗೆದುಕೊಂಡು ಆತನಿಗೆ 'ಆರ್ಯಮಿತ್ರ' ಎಂದು ಹೆಸರಿಟ್ಟು ಉತ್ತಮ ವಿದ್ಯಾಭ್ಯಾಸ ನೀಡಿ ಬೆಳೆಸಿದರು. ಆರ್ಯಮಿತ್ರ ಜಿಲ್ಲಾಧಿಕಾರಿಯಾಗಿ ಉತ್ತಮ ಕಾರ್ಯನಿರ್ವಹಿಸಿದರು.

ಕರ್ನಾಟಕ ಸಾಹಿತ್ಯ ಅಕಾಡೆಮಿಯು ಸುಧಾಕರ ಚತುರ್ವೇದಿ ಅವರಿಗೆ 2007–2008ರಲ್ಲಿ ಗೌರವ ಪ್ರಶಸ್ತಿ ನೀಡಿ ಸನ್ಮಾನಿಸಿತು. 2010ರಲ್ಲಿ ಗಣರಾಜ್ಯೋತ್ಸವ ಸಂದರ್ಭದಲ್ಲಿ ಕರ್ನಾಟಕದ ರಾಜ್ಯಪಾಲರಿಂದ ಸನ್ಮಾನ ಸಂದಿತು.

ಚತುರ್ವೇದ ವಿದ್ವಾಂಸ, ಸ್ವಾತಂತ್ರ ಹೋರಾಟಗಾರ, ಜಲಿಯನ್ ವಾಲಾಬಾಗ್ ಹತ್ಯಾಕಾಂಡದ ಪ್ರತ್ಯಕ್ಷದರ್ಶಿಯಾಗಿದ್ದ ಸುಧಾಕರ್ ಚತುರ್ವೇದಿ ಅವರು 2020ರ ಫೆಬ್ರುವರಿ 27ರಂದು ಬೆಂಗಳೂರಿನಲ್ಲಿ ನಿಧನರಾದರು.

ಲೇಖನ ಕೃಪೆ : ಕನ್ನಡ ಸಂಪದ
ಫೇಸ್ ಬುಕ್ ಪೋಸ್ಟ್

■

# ಇಷ್ಟ

ನನಗೆ ಬೆಟ್ಟ ಗುಡ್ಡಗಳೆಂದರೆ ಇಷ್ಟ
ಕಾಡುಮೇಡುಗಳಲ್ಲಿ ಅಲೆಯುವುದೂ ಇಷ್ಟ

ಬಣ್ಣಗಳಲ್ಲಿ ಕಪ್ಪು ಇಷ್ಟ
ನನ್ನ ಹುಡುಗ ಕೂಡ ಕಡುಗಪ್ಪು
ಕ್ರಾಂತಿಕಾರಿಯಲ್ಲದ ನನಗೆ
ಕೆಂಪು ಇಷ್ಟವಿಲ್ಲ....
ಆಕಾಶ ನೀಲಿಯ ಬಣ್ಣದ ಸೀರೆಗಳು
ಎಷ್ಟಿವೆ ನನ್ನ ಬಳಿ
ನಕ್ಷತ್ರದ ಹೊಳಪುಗಣ್ಣು ಇಷ್ಟ
ಗ್ರಹಗಳಲ್ಲಿ ಶನಿ, ಬಳೆಗಳಿವೆ
ಅವನ ಬಳಿ!

ಪಶು ಪಕ್ಷಿ ಕ್ರಿಮಿ ಕೀಟಗಳಲ್ಲಿ
ಆನೆ ಇರುವೆ ನವಿಲು ಬೆಕ್ಕು ಇಷ್ಟ
ಹೂಗಳಲ್ಲಿ ಕಣಗಿಲೆ ಪಾರಿಜಾತ
ಹಣ್ಣುಗಳಲ್ಲಿ ಮಾವು ಬಾಳೆ ಇಷ್ಟ

ಊಟದಲ್ಲಿ ಗಂಜಿ ಅದರಲ್ಲೂ ಕುಚಲಕ್ಕಿಯದು....
ತಟ್ಟೆಗೂ ಹೊಟ್ಟೆಗೆ ಹಗುರ ,ತಂಪು
ಮಾಡಲು ಸುಲಭ, ಅತಿ ಸರಳ
" ಗಾಂಧಿಯ' ಹಾಗೆ....
ತರಕಾರಿಗಳಲ್ಲಿ ಹಾಗಲ,
ಹಾಗಲ ಕಹಿಯಾದರೂ
ಉದರಕ್ಕೆ ಸಿಹಿ
ಅಂಬೇಡ್ಕರರ ಹಾಗೆ, ಮದ್ದು!
ಕಷ್ಟವಾದರೂ ಇಷ್ಟ !

– ಸವಿತಾ ನಾಗಭೂಷಣ







ಇತ್ತೀಚೆಗೆ ನವದೆಹಲಿಯಲ್ಲಿ ನಡೆದ ಗಾಂಧಿ ಸ್ಮಾರಕ ನಿಧಿಯ 75 ನೇ ವರ್ಷಾಚರಣೆಯ ಪೂರ್ವಭಾವಿ ಸಭೆಯಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರು , ಸದಸ್ಯರು ಭಾಗವಹಿಸಿದ್ದರು .






ಚಾಮರಾಜ ನಗರದ ಸರ್ಕಾರೀ ಪ್ರಥಮ ದರ್ಜೆ ಕಾಲೇಜಿನಲ್ಲಿ ಮಾರ್ಚ್ 19 ರಂದು ಗಾಂಧಿ ಅಧ್ಯಯನ ಕೇಂದ್ರ ಉದ್ಘಾಟನೆಯಾಯಿತು . ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ ಕೃಷ್ಣ ,ದೀನಬಂಧು ಸಂಸ್ಥಾಪಕ ಜಿ ಎಸ್ ಜಯದೇವ್, ಗಾಂಧಿ ಬಳಗದ ಪ್ರೊ ಜಿ ಬಿ ಶಿವರಾಜ್ , ಸಿ ಆರ್ ಪಿ ಎಫ್ ನ ನಿವೃತ್ತ ಐ ಜಿ ಪಿ ಅರ್ಕೇಶ್ ಹಾಗೂ ಚಾಮರಾಜ ನಗರ ಸರ್ಕಾರೀ ಕಾಲೇಜಿನ ಕನ್ನಡ ಪ್ರಾಧ್ಯಾಪಕ ಶಿವಸ್ವಾಮಿ ಕಾರ್ಯಕ್ರಮದಲ್ಲಿದ್ದರು . ಗಾಂಧಿ ಅಧ್ಯಯನ ಕೇಂದ್ರ ಉದ್ಘಾಟನಾ ಕಾರ್ಯಕ್ರಮದಲ್ಲಿ ವಿದ್ಯಾರ್ಥಿನಿಯರು

